೮. ಜ್ಞಾನೇಂದ್ರಿಯ ಕರ್ಮೇಂದ್ರಿಯಂಗಳು = ಬಾಣಗಳು
೯. ಜ್ಞಾನ (ನಿರ್ಮಲ) = ನಂದಕವೆಂಬ ಖಡ್ಗ.
೧೦. ಅಜ್ಞಾನ = ನಂದಕವನ್ನು ಮುಚ್ಚಿಕೊಳ್ಳುವ ಉತ್ತೆ.

ಈ ಯರ್ಥವನ್ನೇ ಕವಿತಾರ್ಕಿಕ ಕೇಸರಿಯೆಂಬ ಬಿರುದಿನಿಂದ ಪ್ರಸಿದ್ಧರಾದ ಶ್ರೀಮದ್ವೇದಾಂತದೇಶಿಕರು ಅಧಿಕಾರಸಙ್ಗ್ರಹವೆಂಬ ತಮ್ಮ ಗ್ರನ್ಥದಲ್ಲಿ "ಪುರುಷನ್ಮಣಿವರಪಾಶ" ಎಂಬ ೪೭ನೆಯ ಪದ್ಯದಲ್ಲಿ ವಿಶದಪಡಿಸಿರುವರು.

ಹೀಗೆ ಚಿದಚಿದ್ವಿಶಿಷ್ಟನಾದ ಸಾಕ್ಷಾತ್ ಪುರುಷೋತ್ತಮನೇ ಅರ್ಚಾವತಾರದಲ್ಲಿ ಕಾಣುವುದರಿಂದ, ಸ್ವಯಂವ್ಯಕ್ತವಾಗಿ ಶ್ರೀರಂಗಕ್ಷೇತ್ರದಲ್ಲಿ ವಿಜಯಮಾಡಿರುವ ಶ್ರೀರಙ್ಗನಾಥನನ್ನು ವೈರಾಗ್ಯನಿಧಿಯಾದ ತೊಣ್ಡರಡಿಪ್ಪೊಡಿಯಾಳ್ವಾರವರು ವೈಕುಂಠಾಧಿಪತಿಯಾದ ಸಾಕ್ಷಾತ್ಪರವಾಸುದೇವನೆಂದೇ ಭಾವಿಸಿದ್ದು ನ್ಯಾಯವೇ. ಈ ಯರ್ಥವನ್ನು ತಾವು ಅನುಸನ್ಧಾನಮಾಡಿದ್ದಲ್ಲದೆ ಲೋಕಕ್ಕೆಲ್ಲಾ ಇದನ್ನು ಬೋಧಿಸಿ ಉಪಕರಿಸಿದರು.

ಸೌಲಭ್ಯಾತಿಶಯವನ್ನು ವಿಶೇಷವಾಗಿ ತೋರಿಸಿಕೊಂಡು ಸಾಕ್ಷಾದ್ವಿಷ್ಣುವು ಈ ಅರ್ಚಾವತಾರದಲ್ಲಿ ಭಕ್ತಾದಿಗಳಿಗೆ ಅನುಕೂಲವಾಗಿರುವಂತೆ 'ತಿರುನರೈಯೂರ್' 'ತಿರುಪತಿ' ಮುಂತಾದ ಪುಣ್ಯಸ್ಥಳಗಳಲ್ಲಿ 'ನಿಂತುಕೊಂಡಿರುವವನಾಗಿಯೂ, 'ತಿರುಕ್ಕೋವಲೂರು' ಮುಂತಾದ ದಿವ್ಯದೇಶಗಳಲ್ಲಿ 'ನಡೆದುಹೋಗುವವನಾಗಿಯೂ,' 'ತಿರುವಾಲಿ' ಮುಂತಾದ ಪುಣ್ಯಸ್ಥಳಗಳಲ್ಲಿ ಕೂತಿರುವವನಾಗಿಯೂ, ಕುಂಭಕೋಣ, ಶ್ರೀರಂಗ, ತಿರುವೆಳ್ಳೂರು, ಶ್ರೀರಂಗಪಟ್ಟಣ ಮುಂತಾದ ದಿವ್ಯದೇಶಂಗಳಲ್ಲಿ ನಾಗಪರ್ಯಙ್ಕದಲ್ಲಿ ಶಯನಿಸಿಕೊಂಡವನಾಗಿಯೂ ಕಂಗೊಳಿಸುವನು. ಹೀಗೆ ಪರಬ್ರಹ್ಮವನ್ನು ಧ್ಯಾನಿಸಬೇಕೆಂದು ಶ್ರೀಮದ್ಭಾಗವತದಲ್ಲಿ ಸ್ಪಷ್ಟಪಡಿಸಿದೆ. (ಸ್ಕಂಧ III, ಅಧ್ಯಾಯ ೨೮, ಶ್ಲೋ. ೧೯).

ಸ್ಥಿತಂವ್ರಜನ್ತಮಾಸೀನಂ ಶಯಾನಂವಾಗುಹಾಶಯಂ ।
ಪ್ರೇಕ್ಷಣೀಯೇಹಿತಂಧ್ಯಾಯೇತ್ ಶುದ್ಧಭಾವೇನಚೇತಸಾ ॥*

ಈ ಅರ್ಥವನ್ನೇ ಚತುಷ್ಕವಿಪ್ರಧಾನರಾದ ತಿರುಮಳ್ಶೈಯಾಳ್ವಾರವರೂ 'ತಿರುವೊಜಿ' ಎಂಬ ಗ್ರನ್ಥದಲ್ಲಿ (೧೪ನೇ ಪಾಶುರದಲ್ಲಿ) ಅಪ್ಪಣೆಕೊಡಿಸಿರುವರು.

ಇಂಥಾ ಸರ್ವಸುಲಭನಾದ ಸರ್ವೇಶ್ವರನನ್ನು ಚೇತನರು ಸಮಾಶ್ರಯಿಸಿ ನಿತ್ಯಕೈಙ್ಕರ್ಯಲಾಭವನ್ನು ಹೊಂದುವುದಕ್ಕೋಸ್ಕರ ಅನೇಕೋಪಾಯಗಳು ಹೇರಳವಾಗಿ ತಿಳಿಸಲ್ಪಟ್ಟಿದ್ದರೂ, ಚಿರಕಾಲಪರಿಶ್ರಮಸಾಧ್ಯಗಳಾದವುಗಳನ್ನು ಬಿಟ್ಟು, ಕಲಿಕಲ್ಮಷಾವಹವಾದ ಈ ಕಾಲಕ್ಕೆ ಅನುಗುಣವಾಗಿ ಚೇತನರಿಗೆ ಸುಲಭವಾಗಿ ಫಲಪ್ರಾಪ್ತಿಯು ಕೈಗೂಡುವಂತೆ ಪೂರ್ವಾಚಾರ್ಯರು ನವವಿಧವಾದ ಉಪಾಯಸೋಪಾನಗಳನ್ನು ಏರ್ಪಡಿಸಿಕೊಟ್ಟಿರುವರು. ಅದು ಹೇಗೆಂದರೆ—

ಶ್ರವಣಂಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವನ್ದನಂದಾಸ್ಯಂ ಸಖ್ಯಮಾತ್ಮನಿವೇದನಂ ॥ †

---

* ಪರಿಶುದ್ಧವಾದ ಅಂತಃಕರಣದಿಂದ (ಆ ಪರಬ್ರಹ್ಮವನ್ನು) ನಿಂತಿರುವವನನ್ನಾಗಿಯೂ, ನಡೆದುಹೋಗುವವನನ್ನಾಗಿಯೂ, ಕೂತಿರುವವನನ್ನಾಗಿಯೂ, ಶಯನಿಸಿಕೊಂಡಿರುವವನನ್ನಾಗಿಯೂ—ಈರೀತಿ ದರ್ಶನೀಯವಾದ ಕಲ್ಯಾಣಗುಣ ವಿಗ್ರಹವಿಶಿಷ್ಟನನ್ನಾಗಿ ಧ್ಯಾನಿಸಬೇಕು.

† ಸಮಸ್ತ ಚಿದಚಿದ್ವಸ್ತುಗಳಲ್ಲಿಯೂ ವ್ಯಾಪಿಸಿಕೊಂಡಿರುವ ಜಗದೀಶ್ವರನ ಅದ್ಭುತಚೇಷ್ಟಿತ ಕಥಾಶ್ರವಣವನ್ನೂ, ಅವನ ದಿವ್ಯನಾಮಸಂಕೀರ್ತನವನ್ನೂ, ಅವನ ಗುಣ ಕರ್ಮಸ್ಮರಣವನ್ನೂ, ಅವನ ದಿವ್ಯಪಾದಸೇವನವನ್ನೂ, ಅವನ ದಿವ್ಯಮಂಗಳವಿಗ್ರಹದ ಪೂಜೆಯನ್ನೂ, ಅವನಿಗೆ ನಮಸ್ಕಾರಮಾಡೋಣವನ್ನೂ, ಅವನಿಗೆ ಅವಿಚ್ಛಿನ್ನವಾದ ಕೈಙ್ಕರ್ಯವನ್ನೂ, ಅವನಲ್ಲಿ ಪ್ರೀತ್ಯತಿಶಯದಿಂದ ಅವನೊಡನೆ ಸ್ನೇಹವನ್ನೂ, ಕೊನೆಗೆ ತನ್ನನ್ನೇ ಅವನಿಗೆ ಸಮರ್ಪಿಸೋಣವನ್ನೂ, ಮುಮುಕ್ಷುವು ಮಾಡತಕ್ಕದ್ದು.

ಕಿರುವದರಿಂದ ಭಕ್ತನಾದವನು ಬೆಳಿಗ್ಗಿನಿಂದ ರಾತ್ರಿಯವರೆಗೂ ತಾನು ಸ್ವಭಾವವಾಗಿ ಮಾಡಬೇಕಾದ ಉಷಃಕಾಲ ಪ್ರಬೋಧ, ದಂತಧಾವನ, ಸ್ನಾನ, ಭೋಜನ, ಬಹಿಃಸೋಪಶಮನ, ತಾಂಬೂಲಚರ್ವಣ, ನಿದ್ರೆ ಮೊದಲಾದ ಕಾರ್ಯಗಳು ಅರ್ಚಾವತಾರದ ಸಾಕ್ಷಾತ್ಪರವಾಸುದೇವನಿಗೆ ತನ್ನ ಹಾಗೆಯೇ ಉಂಟೆಂದು ಭಾವಿಸಿ ಅವುಗಳನ್ನು ಅವನಿಗೇ ಸಮರ್ಪಿಸಿ, ತದನಂತರ ಅವುಗಳನ್ನು ಭಗವತ್ಪ್ರಸಾದ ರೂಪವಾಗಿ ತಾನೂ ಮಾಡಿ ಸ್ವೀಕರಿಸುವನು. ಹೀಗೆ ಅನವರತವೂ ಕೈಂಕರ್ಯಮಾಡಿಕೊಂಡು ಬರೋಣವದರಿಂದ ಅವನ ಸರ್ವಪಾಪಂಗಳೂ ನೀಗಿ ಕರ್ಮಪಾಶದಿಂದ ಬಿಡಿಸಲ್ಪಡುವನು. ಮನುಷ್ಯನಿಗೇ ಸಹಜವಾಗಿರುವ ಸ್ನಾನಪಾನಭೋಜನಾದಿಗಳನ್ನು ತನಗೇ ಪ್ರಥಮತಃ ಸಮರ್ಪಿಸಿ, ತದನಂತರ ಆ ಕೆಲಸಗಳನ್ನು ಭಗವಚ್ಛೇಷರೂಪವಾಗಿ ನಡಿಸಬೇಕೆಂತಲೂ, ತನಗೆ ಭಕ್ತಿಪುರಸ್ಸರವಾಗಿ ಸಮರ್ಪಿಸಿದ ಪತ್ರಪುಷ್ಪ ಫಲಜಲಾದಿಗಳನ್ನು ಅವಾಪ್ತಸಮಸ್ತಕಾಮನಾಗಿದ್ದರೂ ತಾನು ಸ್ವೀಕರಿಸುವುದಾಗಿಯೂ ಸಾಕ್ಷಾತ್ ಶ್ರೀಕೃಷ್ಣನೇ ಅರ್ಜುನನಿಗೆ ಗೀತೆಯಲ್ಲಿ ಉಪದೇಶಮಾಡಿರುವನು. ಅದು ಹೇಗೆಂದರೆ:—

1. ಯತ್ಕರೋಷಿಯದಶ್ನಾಸಿಯಜ್ಜುಹೋಷಿದದಾಸಿಯತ್ ।
ಯತ್ತಪಸ್ಯಸಿಕೌಂತೇಯತತ್ಕುರುಷ್ವಮದರ್ಪಣಂ ॥ IX. 27.

2. ಪತ್ರಂಪುಷ್ಪಂಫಲಂತೋಯಂಯೋಮೇಭಕ್ತ್ಯಾಪ್ರಯಚ್ಛತಿ ।
ತದಹಂಭಕ್ತ್ಯುಪಹೃತಂ ಅಶ್ನಾಮಿಪ್ರಯತಾತ್ಮನಃ ॥ IX. 26.

3. ಮನ್ಮನಾಭವಮದ್ಭಕ್ತೋಮದ್ಯಾಜೀಮಾಂನಮಸ್ಕುರು ।
ಮಾಮೇವೈಷ್ಯಸಿಯುಕ್ತ್ವೈವಮಾತ್ಮಾನಂಮತ್ಪರಾಯಣಃ ॥ IX. 34.

4. ಮಚ್ಚಿತ್ತಾಮದ್ಗತಪ್ರಾಣಾಃ ಬೋಧಯಂತಃಪರಸ್ಪರಂ ।
ಕಥಯಂತಶ್ಚಮಾಂನಿತ್ಯಂತುಷ್ಯಂತಿಚರಮಂತಿಚ ॥ X. 9.

ಹೀಗೆ ಭಗವತ್ಪರಾಯಣರಾಗಿಯೂ ಭಾಗವತನಿಷ್ಠಾಗ್ರೇಸರರಾಗಿಯೂ ಮಹಾವೈರಾಗ್ಯಸಂಪನ್ನರಾಗಿಯೂ ಭಗವದ್ಭಾಗವತಕೈಂಕರ್ಯವೇ ತಮಗೆ ಪರಮಪ್ರಾಪ್ಯವೆಂದು ನಿಶ್ಚಯಬುದ್ಧಿಯುಳ್ಳವರಾಗಿಯೂ ಇದ್ದ ತೊಣ್ಡರಡಿಪ್ಪೊಡಿಯಾಳ್ವಾರವರು ಯಾವಾಗಲೂ ಶ್ರೀರಂಗನಾಥನ ಅವಿಚ್ಛಿನ್ನ ಕೈಂಕರ್ಯದಲ್ಲಿ ನಿರತರಾಗಿ ಕಾಲಕ್ಷೇಪವನ್ನು ಮಾಡುತ್ತಿದ್ದರು.

ಇಂಥಾ ಮಹನೀಯರ ಪ್ರಬೋಧಕೀಸೂಕ್ತಿಯಲ್ಲಿ ಹೇಳಿರುವ (ಸಾಕ್ಷಾತ್ಪರವಾಸುದೇವನಾದ) ಶ್ರೀರಂಗನಾಥನನ್ನು ಉದ್ಬೋಧಮಾಡುವ ಈ ಒಂದು ಕೈಂಕರ್ಯವು, ಮುಮುಕ್ಷುಗಳಾದ ಚೇತನರು ಬೆಳಿಗ್ಗಿನಿಂದ ರಾತ್ರಿಯವರೆಗೂ ನಡಿಸತಕ್ಕ ಇತರ ಕೈಂಕರ್ಯಾದಿಗಳಿಗೆ ಉಪಲಕ್ಷಣವೆಂದು ತಿಳಿಯತಕ್ಕದ್ದು.

---

(1). ಎಲೈ ಕುಂತೀಪುತ್ರನಾದ ಅರ್ಜುನನೇ, ಏನು ಕೆಲಸಮಾಡುತ್ತೀಯೋ, ಏನು ಭೋಜನಮಾಡುತ್ತೀಯೋ, ಏನು ಹೋಮಮಾಡುತ್ತೀಯೋ, ಯಾವುದನ್ನು ದಾನಮಾಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ, ಅದನ್ನೆಲ್ಲಾ ನನಗೆ ಸಮರ್ಪಿಸು.

(2). ಯಾವನು ಭಕ್ತಿಯಿಂದ ನನಗೆ ಒಂದು ಎಲೆಯನ್ನಾದರೂ, ಹೂವನ್ನಾದರೂ, ಫಲವನ್ನಾದರೂ, ನೀರನ್ನಾದರೂ ಸಮರ್ಪಿಸುತ್ತಾನೆಯೋ, ಹಾಗೆ ಭಕ್ತಿಪುರಸ್ಸರವಾಗಿ ಪರಿಶುದ್ಧಾಂತಃಕರಣನಿಂದ ಸಮರ್ಪಿಸಲ್ಪಟ್ಟದ್ದನ್ನು ನಾನು ಭೋಜನಮಾಡುವೆನು.

(3). ಮನಸ್ಸನ್ನು ನನ್ನಲ್ಲಿಯೇ ಉಳ್ಳವನಾಗಿಯೂ, ನನ್ನ ಭಕ್ತನಾಗಿಯೂ, ನನ್ನನ್ನೇ ಪೂಜಿಸುವವನಾಗಿಯೂ ಇದ್ದು, ನನಗೆ ನಮಸ್ಕಾರಮಾಡು. ಹೀಗೆ ನನ್ನನ್ನೇ ನಂಬಿಕೊಂಡಿರುವವನಾಗಿ ನಿನ್ನ ಚಿತ್ತವನ್ನು ನಿಯಮಿಸಿಕೊಂಡು ಇರುವವನಾದರೆ, ನನ್ನನ್ನೇ ನೀನು ಹೊಂದುತ್ತೀಯೆ.

(4). ಕೆಲವು ಉಪಾಸಕರು ನನ್ನಲ್ಲಿಯೇ ಮನಸ್ಸುಳ್ಳವರಾಗಿಯೂ, ನನ್ನಲ್ಲಿಯೇ ಪ್ರಾಣವನ್ನು ಧರಿಸಿಕೊಂಡಿರುವವರಾಗಿಯೂ, ಪರಸ್ಪರ ನನ್ನ ವಿಷಯವನ್ನೇ ಕುರಿತು ಬೋಧಿಸುವವರಾಗಿಯೂ, ನಿತ್ಯವೂ ನನ್ನ ನಾಮಸಂಕೀರ್ತನ ಮಾಡಿಕೊಂಡಿರುವವರಾಗಿಯೂ ಸಂತೋಷಪಡುತ್ತಲೂ ಆನಂದಪಡುತ್ತಲೂ ಇದ್ದಾರೆ.

ಈ "ತಿರುಪ್ಪಳ್ಳಿಯೆಳುಚ್ಚಿ" ಎಂಬ ಗ್ರಂಥದ ಹತ್ತು ಪಾಶುರಗಳಲ್ಲಿಯೂ, ದೊರೆಗಳನ್ನು ಸ್ತುತಿಪಾಠಕರು ಸ್ತುತಿಸಿ ಎಚ್ಚರಿಸುವಂತೆ, ಪ್ರಭಾತಸೂಚಕಂಗಳನ್ನು ತೊಂಡರಡಿಪ್ಪೊಡಿಯಾಳ್ವಾರವರು ಸ್ವಾಮಿಗೆ ಅರಿಕೆಮಾಡಿ, "ಸ್ವಾಮಿ, ಆರಾಧನಕಾಲವು ಸಮೀಪಿಸಿತು, ಪ್ರಬೋಧಕಾಲದಲ್ಲಿ ನೋಡತಕ್ಕ ಮಂಗಳದ್ರವ್ಯಗಳು ಸಿದ್ಧವಾಗಿವೆ, ಮಂಗಳವಾದ್ಯಂಗಳು ಸುತ್ತಲೂ ಮೊಳಗಿಕೊಂಡಿರುವವು; ಭಗವದ್ಭಾಗವತರಿಗೆ ದಾಸಭೂತನಾದ ನಾನೂ, ಚತುರ್ಮುಖ, ಇಂದ್ರ, ಕುಮಾರಸ್ವಾಮಿ ಮುಂತಾದ ದೇವತೆಗಳೆಲ್ಲರೂ ನೀನು ಪ್ರಬೋಧವಾಗುವ ದಿವ್ಯದರ್ಶನವನ್ನು ಮಾಡಿಕೊಂಡು ಆನಂದಿಸಿ ದಿವ್ಯಪಾದಂಗಳಿಗೆ ಎಱಗಿ, ಮಂಗಳಾಶಾಸನಮಾಡಬೇಕೆಂದು ಅವಸರ ಪ್ರತೀಕ್ಷಕರಾಗಿ ಕಾದುಕೊಂಡಿದ್ದೇವೆ; ಆದಕಾರಣ ಕಾರುಣ್ಯನಿಧಿಯಾದ ನೀನು ಎಚ್ಚರಗೊಂಡು ನಮ್ಮನ್ನೆಲ್ಲಾ ಕಟಾಕ್ಷಿಸಿ, ದಾಸಭೂತರಾದ ನಮ್ಮ ಕೈಙ್ಕರ್ಯವನ್ನು ಅಂಗೀಕರಿಸಬೇಕು." ಎಂದು ಪ್ರಾರ್ಥಿಸುವರು. ಈ ಗ್ರಂಥವು 'ಎಣ್ಶೀರ್ಕ್ಕೞಿನೆಡಿಲಡಿಯಾಶಿರಿಯ' ವೃತ್ತದಲ್ಲಿ ಬರೆಯಲ್ಪಟ್ಟಿದೆ.

---

ಈ ಆಳ್ವಾರವರ ಚರಿತ್ರೆಯಲ್ಲಿ (ಆಳ್ವಾರವರ ಪ್ರಭಾವವನ್ನು ಓದಿನೋಡಿರಿ) ಅವರ ಗುಣಾತಿಶಯವನ್ನೂ ವೈರಾಗ್ಯ ಸಂಪತ್ತಿಯನ್ನೂ ತಿಳಿಸಿಕೊಂಡು ಬರುವಾಗ 'ಅವರು ಒಬ್ಬ ದಾಸಿಯ ಸಂಗಕ್ಕೆ ಆಕಸ್ಮಿಕವಾಗಿ ಒಳಪಟ್ಟು ಮಹದ್ವಿಪತ್ತುಗಳನ್ನು ಅನುಭವಿಸಿದರು' ಎಂದು ಹೇಳಿರುತ್ತೆ. ಇದರಿಂದ ನಾವು ತಿಳಿಯಬಹುದಾದ ಫಲಿತಾಂಶವೇನೆಂದರೆ—ಮುಕ್ತಸಮಸ್ತಸಂಗರಾಗಿಯೂ ಪರಮವೈರಾಗ್ಯಸಂಪನ್ನರಾಗಿಯೂ, ವಿವಿಕ್ತಪ್ರದೇಶವಾಸಿಯಾಗಿಯೂ, ಭಗವತ್ಕೈಙ್ಕರ್ಯೈಕಪರರಾಗಿಯೂ ಇದ್ದ ಈ ಮಹನೀಯರಾದ ಆಳ್ವಾರವರಿಗೆ ಕಾದಾಚಿತ್ಕವಾಗಿ ಸಂಭವಿಸಿದ ಸ್ತ್ರೀಸಂಬಂಧದಿಂದ ಮೇಲೆಹೇಳಿದ ಗುಣಾತಿಶಯಗಳೆಲ್ಲಾ ನೀಗಿ, ಅವರು ಕಾಮಪಾಶಕ್ಕೆ ಒಳಪಟ್ಟು ಮರುಳಾಗಿ ಮಹದ್ವಿಪತ್ತುಗಳನ್ನು ಅನುಭವಿಸಿ ನಾಶಹೊಂದುವರಾದರೆಂದು ಹೇಳಿದ್ದೇಯಾದರೆ, ಸಾಧಾರಣವಾಗಿ ಅವಿದ್ಯಾಕ್ರಾಂತರಾಗಿ ಅಪಾರಸಂಸಾರಸಮುದ್ರದಲ್ಲಿ ಮುಳುಗಿ, ಏಳಲು ಅಶಕ್ತರಾಗಿ ಬಿದ್ದಿರುವ ಪ್ರಾಕೃತ ಮನುಷ್ಯರ ವಿಷಯವನ್ನು ಕುರಿತು ಹೇಳತಕ್ಕದ್ದೇನಿದೆ! ಆದುದರಿಂದ ಸ್ತ್ರೀಯರ ವಿಷಯದಲ್ಲಿ ಸಂಗವನ್ನು ಅಗತ್ಯವಾಗಿ ತ್ಯಜಿಸಬೇಕೆಂತಲೂ, ಭಗವದ್ಭಾಗವತರ ವಿಷಯದಲ್ಲಿ ನಿರತಿಶಯಭಕ್ತಿಯುಕ್ತರಾಗಿರಬೇಕೆಂತಲೂ ಸ್ಪಷ್ಟಪಟ್ಟಿತು. ಈ ಸಂಗತಿಯನ್ನು ಕುರಿತು ಶ್ರೀಭಾಗವತದಲ್ಲಿ ಋಭು ಮಹರ್ಷಿಯು ತಮ್ಮ ಅನುಭವಸಿದ್ಧಾಂತವನ್ನು ತಿಳಿಸುವ ಕ್ರಮ ಹೇಗೆಂದರೆ,—

ಸಂಗಂತ್ಯಜೇತಮಿಥುನವ್ರತಿನಾಂಮುಮುಕ್ಷುಃ
ಸರ್ವಾತ್ಮನಾನವಿಸೃಜೇದ್ಬಹಿರಿಂದ್ರಿಯಾಣಿ ।
ಏಕಶ್ಚರನ್ರಹಸಿಚಿತ್ತಮನಂತಈಶೇ
ಯುಞ್ಜೀತತದ್ವ್ರತಿಷುಸಾಧುಷುಚೇತ್ಪ್ರಸಂಗಃ ॥ *

---

ಈ ಗ್ರನ್ಥದಲ್ಲಿ ಹಳಗನ್ನಡದ "ಱ, ೞ" ಅಕ್ಷರಗಳನ್ನು ಅಲ್ಲಲ್ಲಿ ತಕ್ಕಂತೆ ಉಪಯೋಗಿಸಿರುವುದಲ್ಲದೆ ಒತ್ತಕ್ಷರವಾದ "ಱ್ಱ" ಅಕ್ಷರವನ್ನೂ ದ್ರಾವಿಡ ಪದ್ಯಗಳ ಮೂಲಕ್ಕೆ ಅನುಸಾರವಾಗಿ ಉಪಯೋಗಿಸಿದೆ. ಈ ಯಕ್ಷರದ ಉಚ್ಚಾರಣೆಯು ತಮಿೞ್ ಭಾಷೆಯಲ್ಲಿರುವಂತೆಯೇ 'ತ' ಎಂಬುದಕ್ಕೂ 'ಟ್ಟ' ಎಂಬುದಕ್ಕೂ ಮಧ್ಯಸ್ಥವಾಗಿರುವ ಸಂಗತಿಯನ್ನು ವಾಚಕರು ಜ್ಞಾಪಕದಲ್ಲಿ ಇಡತಕ್ಕದ್ದು.

---

* ಮೋಕ್ಷಾಪೇಕ್ಷೆಯುಳ್ಳ ಚೇತನನು ಸಂಸಾರಿಗಳಾಗಿರತಕ್ಕವರ ಸಂಬಂಧವನ್ನು ಬಿಡಬೇಕು; ತನ್ನ ಕರ್ಮೇಂದ್ರಿಯಜ್ಞಾನೇಂದ್ರಿಯಂಗಳನ್ನು ಬಾಹ್ಯವ್ಯಾಪಾರದಲ್ಲಿ ಸರ್ವಥಾ ಬಿಡಕೂಡದು; ಏಕಾಕಿಯಾಗಿದ್ದುಕೊಂಡು ತನ್ನ ಬುದ್ಧಿಯನ್ನು ಅನಂತನಾದ ಶ್ರೀಮನ್ನಾರಾಯಣನಲ್ಲಿ ಸೇರಿಸಬೇಕು; ಯಾವಾಗಲಾದರೂ ಇತರರೊಡನೆ ಸಂಬಂಧಿಸಿ ಸಲ್ಲಾಪಮಾಡಬೇಕಾದರೆ, ಭಗವದ್ಭಕ್ತರಾದ ಸತ್ಪುರುಷರೊಡನೆಮಾತ್ರ ಸಹವಾಸ ಸಲ್ಲಾಪಗಳನ್ನು ಮಾಡತಕ್ಕದ್ದು.

ಶ್ರೀಮತೇರಾಮಾನುಜಾಯನಮಃ.

ತೊಣ್ಡರಡಿಪ್ಪೊಡಿಯಾಳ್ವಾರವರು ಅಪ್ಪಣೆಕೊಡಿಸಿದ

ವೇದಾರ್ಥಸಾರವಾದ

# ತಿರುಪ್ಪಳ್ಳಿಯಯುಚ್ಚಿ.

ತಿರುವರಂಗಪ್ಪೆರುಮಾಳರೈಯರವರು ಅಪ್ಪಣೆಕೊಡಿಸಿದ ತನಿಯನುಗಳು (ಪೀಠಿ ಪದ್ಯಗಳು).

ತಮೇವಮತ್ವಾಪರವಾಸುದೇವಂ ರಙ್ಗೇಶಯಂ ರಾಜವದರ್ಹಣೀಯಂ |
ಪ್ರಾಬೋಧಕೀಂಯೋಽಕೃತಸೂಕ್ತಿಮಾಲಾಂ ಭಕ್ತಾಙ್ಘ್ರಿರೇಣುಂ ಭಗವನ್ತಮೀಡೇ ||

ಪ್ರತಿಪದಾರ್ಥ.

ತಂ ಏವ—ಆ ಸ್ವಾಮಿಯೆಂದೇ
ಮತ್ವಾ—ಪ್ರಪತ್ತಿಮಾಡಿ, ಭಾವಿಸಿ
ಪರವಾಸುದೇವಂ—ಪರಮಪದನಾಥನೆಂದೇ
ರಙ್ಗೇಶಯಂ—ಶ್ರೀರಂಗದಲ್ಲಿ ಶಯನಮಾಡಿಕೊಂಡಿರುವ
ರಾಜವತ್—ಚಕ್ರವರ್ತಿಯಹಾಗೆ
ಅರ್ಹಣೀಯಂ—ಪೂಜ್ಯನಾದ

ಪ್ರಾಬೋಧಕೀಂ—ಪ್ರಭಾತಕಾಲದಲ್ಲಿ ಉದ್ಬೋಧಮಾಡು
ಯಃ ಅಕೃತ—ಯಾರು ರಚಿಸಿದರೋ [ವಂಥಾ
ಸೂಕ್ತಿಮಾಲಾಂ—ಗ್ರಂಥಮಾಲೆಯನ್ನು
ಭಕ್ತಾಙ್ಘ್ರಿರೇಣುಂ—ಭಕ್ತಾಂಘ್ರಿರೇಣು ಎಂಬ
ಭಗವನ್ತಂ—ಪೂಜ್ಯರಾದ ಆಳ್ವಾರವರನ್ನು
ಈಡೇ—ಸ್ತುತಿಸಿ ನಮಸ್ಕರಿಸುವೆನು.

ತಾತ್ಪರ್ಯ.

ಅಖಿಲಭೂಮಂಡಲಾಧಿಪತಿಯಾದ ಚಕ್ರವರ್ತಿಯೋಪಾದಿಯಲ್ಲಿ ಭಕ್ತಿಯಿಂದ ಪೂಜಿಸಲ್ಪಡತಕ್ಕವನಾಗಿಯೂ, ಶ್ರೀರಂಗಕ್ಷೇತ್ರದೊಳ್ ದಿವ್ಯಪರ್ಯ್ಯಙ್ಕದಲ್ಲಿ ಶಯನಿಸಿಕೊಂಡಿರುವ ಶ್ರಿಯಃಪತಿಯನ್ನು ವೇದಾಂತ ಪ್ರತಿಪಾದ್ಯನಾದ ಆ ಸಾಕ್ಷಾತ್ ಪರಮಪದನಾಥನೆಂದೇ ಭಾವಿಸಿ ಪ್ರಪತ್ತಿಮಾಡಿ, ಪ್ರಭಾತಕಾಲದಲ್ಲಿ ಯೋಗನಿದ್ರೆಯಿಂದ ಉದ್ಬೋಧಮಾಡುವಂಥಾ ಈ ದಿವ್ಯ ಗ್ರಂಥಮಾಲೆಯನ್ನು ಲೋಕಹಿತಾರ್ಥವಾಗಿ ರಚಿಸಿದವರು ಯಾರೋ, ಅಂಥಾ ವೈಭವವುಳ್ಳ ಜ್ಞಾನಭಕ್ತಿವೈರಾಗ್ಯ ಭೂಷಿತರಾದ ಭಕ್ತಾಙ್ಘ್ರಿರೇಣು (ತೊಣ್ಡರಡಿಪ್ಪೊಡಿ) ಎಂಬ ಪೂಜ್ಯರಾದ ಆಳ್ವಾರವರನ್ನು ಸ್ತುತಿಸಿ ನಮಸ್ಕರಿಸುವೆನು.

---

I praise and bow to the most venerable Saint Tond[illegible]odi Alvar, who was distinguished for his spiritual knowledge, devotion to the Lord, and renunciation of all transcient worldly pleasures, and who composed, for the good of mankind, Tiruppaḷḷi Yeluchchi—an excellent work containing a series of beautiful Hymns on the subject of the Almighty's waking-up from his conscious sleep (Yôganidra) early in the morning—in the full belief that the Deity Sri Ranganâtha, reclining in Sriranga temple on the divine bed of the many-hooded Adisesha, is the Great Being, the Lord of the Universe, and the very *Theme* of all Vedanta Philosophy, and fit to be adored as the Great Emperor of the whole Universe.

ಛಂದಸ್ಸು:—ಇರುವಿಕರ್ಪನೇರಿಶೈವೆಣ್ಬಾ.

ಮಣ್ಡಙ್ಗುಡಿಯೆನ್ಬರ್ಮಾ ಮಱೈಯೋರ್ಮನ್ನಿಯಶೀರ್
ತೊಣ್ಡರಡಿಪ್ಪೊಡಿ ತೊನ್ನಗರಂ—ವಣ್ಡು|
ತಿಣರ್ತವಯಲ್ತೆನ್ನರಙ್ಗತ್ತಮ್ಮಾನೈಪ್ಪಳ್ಳಿ
ಯುಣರ್ತ್ತುಂ ಪಿರಾ ನುದಿತ್ತವೂರ್ ‖ ... ‖ ೧ ‖

ಪ್ರತಿಪದಾರ್ಥ.

ಮಣ್ಡಙ್ಗುಡಿ ಎನ್ಬರ್—"ಮಣ್ಡಙ್ಗುಡಿ" ಎನ್ನುವರು
ಮಾಮಱೈಯೋರ್—ಪೂಜ್ಯರಾದ ಶ್ರೋತ್ರಿಯರು
ಮನ್ನಿಯಶೀರ್—ಶಾಶ್ವತವಾದ ಯಶಸ್ಸುಳ್ಳ
ತೊಣ್ಡರಡಿಪ್ಪೊಡಿ—ತೊಣ್ಡರಡಿಪ್ಪೊಡಿ ಎಂದು ಹೆಸರುಳ್ಳ
ತೊಲ್ ನಗರಂ—ಪುರಾತನವಾದ ನಗರವು
ವಣ್ಡು—ಭ್ರಮರಗಳು
ತಿಣರ್ತ್ತವಯಲ್—ಎಡೆಬಿಡದೆ ಶಬ್ದಿಸುವ ಗದ್ದೆಗಳುಳ್ಳ
ತೆನ್ನರಙ್ಗತ್ತು—ಸುಂದರವಾದ ಶ್ರೀರಂಗಕ್ಷೇತ್ರದ ದಿವ್ಯ ಸನ್ನಿಧಿಯಲ್ಲಿ
ಅಮ್ಮಾನೈ—ಶಯನಿಸಿಕೊಂಡಿರುವ ಸರ್ವಸ್ವಾಮಿಯಾದ ನಾರಾಯಣನನ್ನು [ಮಾಡುವಂಥಾ
ಪಳ್ಳಿಯುಣರ್ತ್ತುಂ—ಯೋಗನಿದ್ರೆಯಿಂದ ಪ್ರಬೋಧ
ಪಿರಾನ್—ಸ್ವಾಮಿಯಾದಂಥಾ
ಉದಿತ್ತವೂರ್—ಅವತರಿಸಿದ ನಗರವು

ತಾತ್ಪರ್ಯ.

ಭ್ರಮರಗಳು ಎಡೆಬಿಡದೆ ಝೇಂಕರಿಸುವ ಗದ್ದೆಗಳಿಂದ ಸುತ್ತಲ್ಪಟ್ಟಂಥಾ ಸುಂದರವಾದ ಶ್ರೀರಂಗಕ್ಷೇತ್ರದ ದಿವ್ಯಸನ್ನಿಧಿಯಲ್ಲಿ ಶಯನಿಸಿಕೊಂಡಿರುವ ಸರ್ವಸ್ವಾಮಿಯಾದ ಶ್ರೀರಂಗನಾಥನನ್ನು ಯೋಗನಿದ್ರೆಯಿಂದ ಉದ್ಬೋಧಮಾಡುವುದಕ್ಕಾಗಿ ವಿಜ್ಞಾಪಿಸಿಕೊಂಡಂಥಾ ತೊಣ್ಡರಡಿಪ್ಪೊಡಿಯಾಳ್ವಾರವರು ಅವತರಿಸಿದ ದಿವ್ಯದೇಶವು ಶಾಶ್ವತವಾದ ಯಶಸ್ಸುಳ್ಳ "ತಿರುಮಣ್ಡಙ್ಗುಡಿ" ಎಂದು ಪೂಜ್ಯರಾದಂಥಾ ಅಧ್ಯಯನಸಂಪನ್ನರಾದ ಶ್ರೋತ್ರಿಯರು ಹೇಳಿ ಕೊಣ್ಡಾಡುವರು.



The eminently learned scholars, well-versed in the Vedas, proclaim the sacred city of **Mandankudi** as the famous *birthplace* of Saint Tondaradippodi Alvar, who awoke, by his celebrated *Hymns* of **Tiruppalliyeluchchi,** the Great Father of all, from His *conscious* sleep (Yoganidra) in the magnificient temple of Srirangam, surrounded by paddy fields, to which the bees resort in large numbers (for gathering honey).

ಕದಿರವನ್ಕುಣದಿಶೈಚ್ಚಿಕರಂವನ್ದಣೈನ್ದಾನ್ ಕನವಿರುಳಕನ್ಱದುಕಾಲೈಯಂಬೊೞುದಾಯ್ |
ಮದುವಿರಿನ್ದೊೞುಕಿನಮಾಮಲರೆಲ್ಲಾಂ ವಾನವರರಶರ್ಕಳ್ವನ್ದುವನ್ದೀಣ್ಡಿ ||
ಎದಿರ್ದಿಶೈನಿಱೈನ್ದನರಿವರೊಡುಂ ಪುಕುನ್ದ ಇರುಂಗಳಿಱ್ಱೀಟ್ಟಮುಂಪಿಡಿಯೊಡುಮುರಶು |
ಮದಿರ್ದಲಿಲಲೈಕಡಲ್ಪೋನ್ಱುಳದೆಙ್ಗುಂ ಅರಙ್ಗತ್ತಮ್ಮಾಪಳ್ಳಿಯೆೞುನ್ದರುಳಾಯೇ ||೧||

ಕದಿರವನ್ ಕುಣದಿಶೈಚ್ಚಿಕರಂ—ಸೂರ್ಯನು ಪೂರ್ವದಿಕ್ಕಿನ ನೆತ್ತಿಯನ್ನು
ವನ್ದಣೈನ್ದಾನ್—ಬಂದು ಸೇರಿದಾನೆ
ಕನ ಇರುಳ್—ಘನವಾದ ಕತ್ತಲೆಯು
ಅಕನ್ಱದು—ದೂರ ಹೋಯಿತು
ಕಾಲೈಯಂಪೊೞುದಾಯ್—ಬೆಳಕು ಹರಿಯುವ ಕಾಲವಾಗಿ
ಮದು ವಿರಿನ್ದು ಒೞುಕಿನ—ಅರಳಿ ಮಧು ಪ್ರವಹಿಸಿತು
ಮಾಮಲರೆಲ್ಲಾಂ—ದೊಡ್ಡ ದೊಡ್ಡ ಪುಷ್ಪಗಳು
ವಾನವರ್ ಅರಶರ್ಕಳ್—ದೇವತೆಗಳೂ ಅರಸರೂ
ವನ್ದುವನ್ದು ಈಣ್ಡಿ—ಬಂದು ಬಂದು ಕೂಡಿ
ಎದಿರ್ದಿಶೈ ನಿಱೈನ್ದನರ್—ಎದುರಿಗೆ ತುಂಬಿದಾರೆ

ಇವರೊಡುಂಪುಕುನ್ದ—ಇವರಿಗೆ ವಾಹನವಾಗಿ ಬಂದ
ಇರುಂಕಳಿಱ್ಱು ಈಟ್ಟಮುಂ—ದೊಡ್ಡ ಗಂಡಾನೆ ಕೂಟವು
ಪಿಡಿಯೊಡು—ಹೆಣ್ಣಾನೆಗಳೊಡನೆ
ಮುರಶುಂ—ಮುರಜವಾದ್ಯವು
ಅದಿರ್ದಲಿಲ್—ಶಬ್ದ ಮಾಡುವುದರಲ್ಲಿ
ಅಲೈಕಡಲ್ಪೋನ್ಱು—ಅಲೆಗಳುಳ್ಳ ಸಮುದ್ರಘೋಷದಂತೆ
ಉಳದು ಎಙ್ಗುಂ—ಎಲ್ಲೆಲ್ಲಿಯೂ ಇರುವುದು
ಅರಙ್ಗತ್ತಮ್ಮಾ—ಶ್ರೀರಂಗದಲ್ಲಿ ಬಿಜಯಮಾಡಿರುವ ಸ್ವಾಮಿಯೇ
ಪಳ್ಳಿಎೞುನ್ದು—ಶಯನದಿಂದೆದ್ದು
ಅರುಳಾಯೇ—ಕೃಪೆಮಾಡಬೇಕು.

ಸರ್ವರಕ್ಷಕನಾದ ಸ್ವಾಮಿಯೇ, ದಾಸಭೂತರಾದ ನಮ್ಮಗಳ ವಿಜ್ಞಾಪನೆಯನ್ನು ಲಾಲಿಸು:—ಲೋಕಸಾಕ್ಷಿಯಾದ ಸೂರ್ಯನು ಪೂರ್ವದಿಕ್ಕಿನಲ್ಲಿರುವ ಉದಯಗಿರಿಯ ನೆತ್ತಿಯನ್ನು ಆಗಲೇ ಸೇರಿದಾನೆ; ರಾತ್ರಿಯೆಲ್ಲಾ ನಿಬಿಡವಾಗಿದ್ದ ಘನವಾದ ಕತ್ತಲೆಯು ದೂರ ಹೊರಟುಹೋಯಿತು; ನಿನ್ನ ಆರಾಧನೆಯನ್ನು ಮಾಡಲು ಯೋಗ್ಯವಾದ ಪ್ರಭಾತಕಾಲವು ಸಮೀಪಿಸಿತು; ತಾವರೇ ಮುಂತಾದ ದೊಡ್ಡ ದೊಡ್ಡ ಪುಷ್ಪಂಗಳು ವಿಕಸಿತವಾಗಿ, ಅವುಗಳಿಂದ ಮಧುವು ಪ್ರವಹಿಸುತ್ತಲಿರುವುದು; ದೇವತೆಗಳೂ ಮತ್ತು ಮಹಾರಾಜರೂ ಬಂದು ಬಂದು ಕೂಡಿ ಉಭಯವಿಭೂತಿವಿಶಿಷ್ಟನಾದ ನಿನ್ನ ಸನ್ನಿಧಿಯ ಎದುರಿಗೆ ನಿನ್ನ ಕಟಾಕ್ಷವೀಕ್ಷಣಕ್ಕೋಸ್ಕರ ಕೂಟವಾಗಿ ತುಂಬಿದಾರೆ; ಇವರೊಡನೆ ಬಂದ ಇವರ ವಾಹನಂಗಳಾದ ಗಂಡಾನೇ ಸಮೂಹವೂ ಹೆಣ್ಣಾನೆಯ ಸಮೂಹವೂ ಮತ್ತು ಮುರಜವಾದ್ಯಗಳೂ—ಇವುಗಳ ಮಹಾಧ್ವನಿಯು ಅಲೆಗಳುಳ್ಳ ಸಮುದ್ರ ಘೋಷದಂತೆ ಎಲ್ಲೆಲ್ಲಿಯೂ ವ್ಯಾಪಿಸಿರುವುದು. ಆದುದರಿಂದ ಶ್ರೀರಙ್ಗಕ್ಷೇತ್ರಕ್ಕೆ ಅಧಿಪತಿಯಾದ ಶ್ರೀರಂಗನಾಥನೇ, ನೀನು ಈ ಪ್ರಭಾತಕಾಲದಲ್ಲಿ ದಿವ್ಯಪರ್ಯಙ್ಕದಿಂದ ಎದ್ದು ದಾಸಭೂತರಾದ ನಮ್ಮನ್ನು ಕಟಾಕ್ಷಿಸಿ ನಮ್ಮನ್ನು ಕೈಙ್ಕರ್ಯವೃತ್ತಿಯಲ್ಲಿ ನಿಯಮಿಸಿ ಅನುಗ್ರಹಿಸಬೇಕು.

---

O Great Father ! the Preserver of the Universe, The sun has now reached the extreme point of the horizon on the Udayagiri (Eastern moutnain); while thick darkness, that had reigned supreme during the night, has receded ; and the bright day has dawned, fit to be the auspicious occasion for commencing Thy worship The honey of the blossomed flowers, such as the lotus, the jasmine, has been oozing out in profusion; the celestial demigods as well as the terrestrial sovereigns are standing in groups in the front-yard of Thy Temple so as to have a favourable view of Thy kind side glances; the noise of the male elephants that accompanied these beings with their female companions, as well as the sounds of the muraja (tabor) instruments, collectively resemble the roaring sound of a grand ocean, boisterous with high waves. O Lord of Srirangа Temple, deign to wake upf rom Thy conscious sleep, and be graciously pleased to enjoin upon us, Thy faithful devotees, our suitable devotional services.

ಕೊೞುಙ್ಕೊಡಿಮುಲ್ಲೈಯಿನ್ಕೊೞುಮಲರಣವಿಕ್ಕೂರ್ನ್ದದುಕುಣದಿಶೈಮಾರುತಮಿದುವೋ।
ಎೞುನ್ದನಮಲರಣೈಪ್ಪಳ್ಳಿಕೊಳ್ಳನ್ನ ಮೀನ್ಪನಿನನೈನ್ದತಮ್ಮಿರುಞ್ಶಿಱಗುದಱಿ॥
ವಿೞುಙ್ಗಿಯಮುದಲೈಯಿನ್ಪಿಲಂಪುರೈಪೇೞ್ವಾಯ್ ವೆಳ್ಳೆಯಿಱುಱವದನ್ವಿಡತ್ತಿನುಕ್ಕನುಙ್ಗಿ।
ಅೞುಙ್ಗಿಯವಾನೈಯಿನರುನ್ದುಯರ್ಕೆಡುತ್ತವರಙ್ಗತ್ತಮ್ಮಾಪಳ್ಳಿಯೆೞುನ್ದರುಳಾಯೇ॥

ಕೊೞುಙ್ಕೊಡಿಮುಲ್ಲೈಯಿನ್—ಹೊರವಾಗಿ ಬೆಳೆದ
ಲತೆಗಳುಳ್ಳ ಮೊಲ್ಲೆಯ [ಪರಿಮಳವನ್ನಪ್ಪಿಕೊಂಡು
ಕೊೞುಮಲರ್ ಅಣವಿ—ಸುಂದರವಾದ ಹೂವಿನ ಪರಿ
ಕೂರ್ನ್ದದು—ಹೆಚ್ಚಿಗೆಯನ್ನು ಹೊಂದಿದೆ [ರುತವು
ಕುಣದಿಶೈಮಾರುತಮಿದುವೋ—ಈ ಪೂರ್ವದಿಕ್ಕಿನ ಮಾ
ಎೞುನ್ದನ—ಹೊರಟವು [ಗೆಯಲ್ಲಿ
ಮಲರ್‌ಅಣೈ—ತಾವರೇ ಮೊದಲಾದ ಹೂವಿನ ಹಾಸು
ಪಳ್ಳಿಕೊಳ್ ಅನ್ನಂ—ನಿದ್ರೆಮಾಡುವ ಹಂಸಮಿಥುನಗಳು
ಈನ್ಪನಿ ನನೈನ್ದ—ಹುಯ್ದ ಮಂಜಿನಿಂದ ಒದ್ದೆಯಾದ
ತಂ ಇರುಂಶಿಱಗು—ತಮ್ಮ ಹಿರಿದಾದ ರೆಕ್ಕೆಗಳನ್ನು
ಉದಱಿ—ಒದರಿಕೊಂಡು

ವಿೞುಙ್ಗಿಯಮುದಲೈಯಿನ್—ನುಂಗಿದ ಮೊಸಳೆಯ
ಪಿಲಂಪುರೈ—ಗುಹೆಯನ್ನು ಹೋಲಿದ
ಪೇೞ್ವಾಯ್—ದೊಡ್ಡ ಬಾಯುಳ್ಳ
ವೆಳ್ಳೆಯಿಱು ಉಱ—ಬೆಳ್ಳಗಿರುವ ಹಲ್ಲುಗಳು ತಗಲಲು
ಅದನ್‌ವಿಡತ್ತಿನುಕ್ಕು—ಅದರ ದಂತದ ವಿಷಕ್ಕೆ
ಅನುಙ್ಗಿ, ಅೞುಙ್ಗಿಯ—ಅಂಜಿ ಆರ್ತ್ತಧ್ವನಿಮಾಡಿದ
ಆನೈಯಿನ್—ಶ್ರೀಗಜೇಂದ್ರನ
ಅರುಂತುಯರ್ಕೆಡುತ್ತ—ಕಡುದುಃಖವನ್ನು ನೀಗಿದ
ಅರಙ್ಗತ್ತಮ್ಮಾ—ಶ್ರೀರಂಗನಾಥಸ್ವಾಮಿಯೇ
ಪಳ್ಳಿ ಎೞುನ್ದು—ಶಯನದಿಂದೆದ್ದು
ಅರುಳಾಯೇ—ಕೃಪೆಮಾಡಿ ಕಟಾಕ್ಷಿಸು.

ಎಲೈ ಸ್ವಾಮಿಯೇ, ಪ್ರಭಾತಸೂಚಕವಾಗಿ ಪೂರ್ವದಿಕ್ಕಿನ ಈ ಮಾರುತವು ಹೊರವಾಗಿ ಬೆಳದ ಲತೆಗಳುಳ್ಳ ಮೊಲ್ಲೆಯಗಿಡದ ಸುಂದರವಾದ ಹೂವುಗಳಲ್ಲಿನ ಪರಿಮಳವನ್ನೆಲ್ಲಾ ಅಪ್ಪಿಕೊಂಡು ಬಂದು "ನೀವುಗಳೆಲ್ಲಾ ಇನ್ನೂ ಏಕೆನಿದ್ರೆಗೆಯ್ಯುತ್ತಿರುವಿರಿ" ಎನ್ನುವಹಾಗೆ ವ್ಯಾಪಿಸಿಕೊಂಡು ಬೀಸುತ್ತಾ ಇಲ್ಲೆಲ್ಲಾ ಅಭಿವೃದ್ಧವಾಗುತ್ತಿದೆ; ಕಮಲವೇ ಮೊದಲಾದ ಹುಪ್ಪಿನ ಹಾಸುಗೆಯಲ್ಲಿ ನಿದ್ರೆಮಾಡುವ ಹಂಸಮಿಥುನಗಳು ರಾತ್ರಿಯಲ್ಲಿ ಹುಯ್ದಹನಿಯಿಂದ ಒದ್ದೆಯಾಗಿ ಹೋದ ತಮ್ಮ ವಿಶಾಲವಾದ ರೆಕ್ಕೆಗಳನ್ನು ಒದರಿಕೊಂಡು ಹೊರಗೆ ಹೊರಟವು: ಹೀಗೆ ಪ್ರಭಾತಸಮಯದ ನಿನ್ನ ಆರಾಧನ ಕಾಲವು ಸಮೀಪಿಸಿದೆ. ತನ್ನನ್ನು ನುಂಗಿಬಿಡಲು ಬಂದದೊಡ್ಡ ಮೊಸಳೆಯ ಗುಹೆಯೋಪಾದಿಯಲ್ಲಿರುವ ಅಗಲವಾದ ಬಾಯಿನ ಬಿಳೀಹಲ್ಲುಗಳು ತನ್ನ ಶರೀರವನ್ನು ತಗಲಲಾಗಿ, ಅದರ ದಂತದ ವಿಷಕ್ಕೆ ಅಂಜಿ ನಿನ್ನನ್ನು ಶರಣಹೊಂದಿ ಆರ್ತ್ತಧ್ವನಿಮಾಡಿದ ಶ್ರೀಗಜೇಂದ್ರನ ಕಡುದುಃಖವನ್ನು ನೀಗಿದ ಆಶ್ರಿತವತ್ಸಲನಾದ ಶ್ರೀರಙ್ಗನಾಥಸ್ವಾಮಿಯೇ, ಯೋಗನಿದ್ರೆಯಿಂದ ಎಚ್ಚರಗೊಂಡು ಆರ್ತ್ತರಾದ ನಮ್ಮಮೇಲೆ ಕೃಪೆಮಾಡಿ ಕಟಾಕ್ಷಿಸಿ ಕೈಙ್ಕರ್ಯವೃತ್ತಿಯಲ್ಲಿ ನಿಯಮಿಸಬೇಕು.

---

O Lord, may Thou graciously hear these humble supplications of thy devotees. As an indication of the break of the day, the eastern breeze is blowing agreeably more and more, wafting along with it the fragrance of the white flowers of the luxuriantly grown *Mullai* creepers, as if to inquire why the people have not yet awakened even after sunlight; the swan-couples that had taken their beds in the midst of lotus-flowers have come out fluttering their large wings soaked in the dew that had fallen during the night; accordingly the auspicious occasion to commence Thy worship has arrived. O Thou Lord of Sriranga! the Reliever of the great elephant (Gajéndra) from his unbearable sufferings when he bitterly and piteously cried for help, having suffered much from the venomous bite of the white teeth of the crocodile, whose spacious mouth resembled a cave, condescend to wake up from Thy *conscious sleep* to extend Thy gracious look on Thy servants.

ಶುಡರೊಳಿಪರನ್ದನಶೂಳ್ದಿಶೈಯೆಲ್ಲಾಂ ತುನ್ನಿಯತಾರಕೈಮಿನ್ನೊಳಿಶುರುಙ್ಗಿ |
ಪ್ಪಡರೊಳಿಪಶುತ್ತನನ್ಪನಿಮತಿಯಿವನೋ ಪಾಯಿರುಳಕನ್ರದುಪೈಂಪೊಳಿಲ್ಕಮುಕಿನ್ |
ಮಡಲಿಡೈಕ್ಕೀಱಿವಣ್ಪಾಳೈಕಳ್ನಾಱಿ ವೈಕರೈಕೂರ್ನ್ದದುಮಾರುತಮಿದುವೋ |
ಶುಡರೊಳಿತಿಗಿರಿತಡಕ್ಕೈ ಯರಙ್ಗತ್ತಮ್ಮಾಪಳ್ಳಿಯೆಳುನ್ದರುಳಾಯೇ |೩|

| | |
|---|---|
| ಶುಡರೊಳಿಪರನ್ದನ—ಸೂರ್ಯನಕಿರಣಗಳು ವ್ಯಾಪಿಸಿದವು | ವಣ್ ಪಾಳೈಕಳ್—ಚೊಕ್ಕವಾದ ಹೊಂಬಾಳೆಗಳು |
| ಶೂಳ್ದಿಶೈಯೆಲ್ಲಾಂ—ಆವರಿಸಲ್ಪಟ್ಟ ಎಲ್ಲಾದಿಕ್ಕಿನಲ್ಲಿ | ನಾಱಿ—ವಾಸನೆಯನ್ನು ಬೀಸಲು |
| ತುನ್ನಿಯತಾರಕೈ—ನಿಬಿಡವಾದ ನಕ್ಷತ್ರಂಗಳು | ವೈಕರೈ—ಪ್ರಾತಃಕಾಲದ |
| ಮಿನ್ನೊಳಿ ಶುರುಙ್ಗಿ—ಮಿಂಚುವಪ್ರಕಾಶವು ಕುಂದಿ | ಕೂರ್ನ್ದದು—ವೇಗವಾಯಿತು, ಅಭಿವೃದ್ಧವಾಯಿತು |
| ಪಡರೊಳಿ—ವಿಸ್ತರಿಸಿದ ಪ್ರಕಾಶವುಳ್ಳ | ಮಾರುತಂ ಇದುವೋ—ಈ ವಾಯುವು, ಗಾಳಿ |
| ಪಶುತ್ತನನ್—ಕಳೆಗುಂದಿದನು | ಅಡರೊಳಿ—ಸ್ಫುರತ್ತಾದ ಪ್ರಕಾಶವು |
| ಪನಿಮತಿ ಇವನೋ—ತಣ್ಣಗಿರುವ ಈ ಚಂದ್ರನು | ತಿಕ್ಕಿತರು—ಬೆಳಗುತ್ತಿರುವ |
| ಪಾಯ್ ಇರುಳ್—ಆವರಿಸಿದ್ದ ಕತ್ತಲೆಯು | ತಿಕಿರಿ—ಶ್ರೀಚಕ್ರಾಯುಧವನ್ನು "ಧರಿಸಿರುವ" |
| ಅಕನ್ರದು—ಹಿಂದಕ್ಕೆ ಹೋಯಿತು | ತಡಕ್ಕೈ—ಸುಂದರ ವಿಶಾಲ ಹಸ್ತಗಳುಳ್ಳ |
| ಪೈಂಪೊಳಿಲ್—ಪಚ್ಚೆಯಾದ ಉದ್ಯಾನಗಳಲ್ಲಿರುವ | ಅರಙ್ಗತ್ತಮ್ಮಾ—ಶ್ರೀರಙ್ಗನಾಥ ಸ್ವಾಮಿಯೇ |
| ಕಮುಕಿನ್—ಅಡಿಕೇಮರಗಳ [ದು | ಪಳ್ಳಿಎಳುನ್ದು—ನಾಗಪರ್ಯಙ್ಕವನ್ನು ಬಿಟ್ಟು ಎದ್ದು |
| ಮಡಲಿಡೈಕ್ಕೀಱಿ—ಎಳೇಮಟ್ಟೆಗಳನಡುವೆ ಸೀಳಿಕೊಂ | ಅರುಳಾಯೇ—ದಾಸಭೂತರಾದ ನಮ್ಮನ್ನು ಕಟಾಕ್ಷಿಸು |

ಸರ್ವಲೋಕಶರಣ್ಯನಾದ ಸ್ವಾಮಿಯೇ, ನಿನ್ನ ತಿರುವಡಿಗಳಲ್ಲಿ ವಿಜ್ಞಾಪನೆ ಏನೆಂದರೆ—ಆವರಿಸಿರುವ ದಿಕ್ಕಿನಲ್ಲೆಲ್ಲಾ ಈಗ ಸೂರ್ಯನ ಕಿರಣಗಳು ವ್ಯಾಪಿಸಿವೆ; ರಾತ್ರಿಯಲ್ಲೆಲ್ಲಾ ಥಳಥಳವೆಂದು ಪ್ರಕಾಶಿಸುತ್ತಲಿದ್ದ ನಿಬಿಡವಾದ ನಕ್ಷತ್ರಗಳು ಕಳೆಗುಂದಿಹೋದವು; ಬೆಳದಿಂಗಳು ಎಲ್ಲೆಲ್ಲಿಯೂ ವ್ಯಾಪಿಸುವಂತೆ ಪ್ರಕಾಶಿಸುತ್ತಿದ್ದ ಹಿಮಕರನಾದ ಚಂದ್ರನು ತನ್ನ ಕಾಂತಿಯುಡುಗಿ ವ್ಯತ್ಯಸ್ತ ಸ್ವರೂಪನಾಗಿ ತೋರುತ್ತಾನೆ; ಅಷ್ಟದಿಕ್ಕುಗಳಲ್ಲಿಯೂ ಇರುಳೆಲ್ಲಾ ಆವರಿಸಿದ್ದ ಕತ್ತಲೆಯು ತೊಲಗಿಹೋಯಿತು; ಪಚ್ಚೆಯಾದ ಉದ್ಯಾನವನಗಳಲ್ಲಿರುವ ಅಡಿಕೇಮರಗಳ ಎಳೇಮಟ್ಟೆಗಳ ನಡುವೆ ಸೀಳಿಕೊಂಡು ಚೊಕ್ಕವಾಗಿ ಬೆಳೆದ ಹೊಂಬಾಳೆಗಳು ವಾಸನೆಯನ್ನು ಬೀಸಲಾಗಿ, ಆ ಪರಿಮಳವನ್ನು ಪ್ರಾತಃಕಾಲದ ಮಾರುತವು ವಿಶೇಷವಾಗಿ ತೆಗೆದುಕೊಂಡು ಬರುತ್ತಲಿದೆ. ಆದಕಾರಣ ತೇಜಃಪ್ರಚುರವಾದ ಶ್ರೀಚಕ್ರಾಯುಧವನ್ನು ಸುಂದರವಾಗಿಯೂ ವಿಶಾಲವಾಗಿಯೂ ಇರುವ ಶ್ರೀಹಸ್ತದಲ್ಲಿ ಧರಿಸಿಕೊಂಡು ಶ್ರೀರಂಗಕ್ಷೇತ್ರದಲ್ಲಿ ಬಿಜಮಾಡಿರುವ ಸ್ವಾಮಿಯೇ, ನಿನ್ನದಿವ್ಯಪಾದಂಗಳ ಸೇವೆಯನ್ನು ನಾವು ಅನುಭವಿಸುವಂತೆ ನೀನು ದಿವ್ಯನಾಗ ಪರ್ಯಙ್ಕದಿಂದ ಎದ್ದು ದಾಸಭೂತರಾದ ನಮ್ಮಮೇಲೆ ಕಟಾಕ್ಷವಿಟ್ಟು ಕೈಙ್ಕರ್ಯವೃತ್ತಿಯಲ್ಲಿ ನಿಯಮಿಸಿ ಅನುಗ್ರಹಿಸಬೇಕು.

---

O Lord, the Highest Refuge of the whole Universe! the sunlight has spread itself on all sides; while the stars studding the sky have gradually become dim; the cool moon has changed her bright color into the yellow, the darkness that had enveloped the world has now disappeared; the full-blossomed flower-sheets that have sprung up in the midst of stems of Areca-nut trees found in verdured groves having given out sweet smell, the morning breeze, blowing over these parts, has wafted such fragrance, and is felt here. O Great Father! Lord of Sriranga, in whose handsome and spacious right-hand is found the great Discus of effulgent glory and brilliance, be pleased to wake up from Thy *conscious sleep*, so that we may have the opportunity to enjoy Thy happy, glorious and handsome appearance.

ಮೇಟ್ಟಿಳಮೇತಿಕತ್ತಳೈವಿಡುಮಾಯರ್ಗಳ್ ವೇಯ್ಂಗುಳಲೋಶೈಯುಂವಿಡೈಮಣಿಕ್ಕುರಲುಂ |
ಈಟ್ಟಿಯವಿಶೈತಿಶೈಪರನ್ದನವಯಲುಳ್ ಇರಿನ್ದನಶುರುಂಬಿನಮಿಲಂಗೈಯರ್ಕುಲತ್ತೈ |
ವಾಟ್ಟಿಯವರಿಶಿಲೈವಾನವರೇಱೇ ಮಾಮುನಿವೇಳ್ವಿಯೈಕ್ಕಾತ್ತವಬಿರತ |
ಮಾಟ್ಟಿಯವಡುತಿಱಲಯೋತ್ತಿಯೆಮ್ಮರಶೇ ಯರಙ್ಗತ್ತಮ್ಮಾಪಳ್ಳಿಯೆಳುನ್ದರುಳಾಯೇ ‖

ಮೇಟ್ಟಿಳಮೇತಿಕಳ್—ದಪ್ಪವಾದ ಎಳೆಯ ಎಮ್ಮೆಗಳು
ತಳೈವಿಡುಮಾಯರ್ಗಳ್—ಕಟ್ಟುಗಳನ್ನು ಬಿಡಿಸುವಂ
ಥಾ ಗೋಪಾಲಕರು
ವೇಯ್ಂಗುಳಲ್ ಓಶೈಯುಂ—ಊದುವ ಬಿದುರು ಕೊಳ
ಲಿನ ಶಬ್ದವನ್ನು [ವೂ
ವಿಡೈಮಣಿಕ್ಕುರಲುಂ—ವೃಷಭ ಕಂಠಮಣಿಯ ಶಬ್ದ
ಈಟ್ಟಿಯವಿಶೈ—ಇವೆಲ್ಲಾ ಸೇರಿದ ಶಬ್ದವೂ
ತಿಶೈಪರನ್ದನ—ದಿಕ್ಕುಗಳನ್ನೆಲ್ಲಾ ವ್ಯಾಪಿಸಿತು
ವಯಲುಳ್—ಗದ್ದೆಗಳಲ್ಲಿನ ಪುಷ್ಪಗಳಲ್ಲಿ
ಇರಿನ್ದನ—ಚದುರಿ ಓಡಿ ಹೋದವು
ಶುರುಂಬಿನಂ—ಭ್ರಮರಗಳ ಗುಂಪುಗಳು [ವನ್ನು
ಇಲಙ್ಗೈಯರ್ಕುಲತ್ತೈ—ಲಂಕೆಯ ರಾಕ್ಷಸರ ವಂಶ

ವಾಟ್ಟಿಯವರಿಶಿಲೈ—ನಿಶ್ಶೇಷವಾಗಿ ತೊಲಗಿಸಿದ ದಿವ್ಯ
ಶ್ರೀಶಾರ್ಙ್ಗಾಯುಧವುಳ್ಳ
ವಾನವರೇಱೇ—ಬ್ರಹ್ಮಾದಿದೇವತೆಗಳಿಗೂ ಸ್ವಾಮಿಯೇ
ಮಾಮುನಿವೇಳ್ವಿಯೈ—ವಿಶ್ವಾಮಿತ್ರ ಯಾಗವನ್ನು
ಕಾತ್ತು—ರಕ್ಷಿಸಿ [ಸಿದ
ಅವಬಿರತಂ ಆಟ್ಟಿಯ—ಅವಭೃತಸ್ನಾನವನ್ನು ಮಾಡಿ
ಅಡುತಿಱಲ್—ಶತ್ರುನಿರಸನವಮಾಡುವ ಸಾಮರ್ಥ್ಯವುಳ್ಳ
ಅಯೋತ್ತಿ ಎಮ್ಮರಶೇ—ಅಯೋಧ್ಯಾಧಿಪತಿಯಾದ
ಅರಸೆ
ಅರಙ್ಗತ್ತಮ್ಮಾ—ಶ್ರೀರಙ್ಗನಾಥಸ್ವಾಮಿಯೇ
ಪಳ್ಳಿಎಳುನ್ದು—ನಾಗಪರ್ಯಙ್ಕವನ್ನು ಬಿಟ್ಟು ಎದ್ದು
ಅರುಳಾಯೇ—ದಾಸಭೂತರಾದ ನಮ್ಮನ್ನು ಕಟಾಕ್ಷಿಸು

ಸಮಸ್ತಲೋಕರಕ್ಷಕನಾದ ಸ್ವಾಮಿಯೇ, ನನ್ನ ವಿಜ್ಞಾಪನವನ್ನು ಲಾಲಿಸು—ಮೈದಪ್ಪವಾಗಿ ಬೆಳೆದಿರುವ ಎಳೆಯ ಎಮ್ಮೆಗಳ ಕಟ್ಟುಗಳನ್ನು ಗೋಪಾಲಕರು ಬಿಡಿಸಿದ ನಂತರ ಊದುವ ಕೊಳಲಿನ ಶಬ್ದವೂ, ವೃಷಭಗಳ ಕಂಠದಲ್ಲಿ ಕಟ್ಟಿರುವ ಘಂಟೆಗಳ ಶಬ್ದವೂ—ಇವೆರಡೂ ಸೇರಿ ದಿಕ್ಕುಗಳನ್ನೆಲ್ಲಾ ವ್ಯಾಪಿಸಿಕೊಂಡಿದೆ; ಗದ್ದೆಗಳ ಅಂತರಾಳಗಳಲ್ಲಿ ಅಲರ್ದಿರುವ ಕಮಲ ಪುಷ್ಪಗಳಲ್ಲಿ ತುಂಬಿದ್ದ ಮಧುವನ್ನು ಪಾನಮಾಡಿ ಝೇಂಕರಿಸುವ ಭ್ರಮರಸಮೂಹವು ಚದುರಿಹೋಯಿತು; ಆದಕಾರಣ ನಿನ್ನ ಆರಾಧನ ಯೋಗ್ಯವಾದ ಕಾಲವು ಪ್ರಾಪ್ತವಾಯಿತು. ಪೂರ್ವಕಾಲದೊಳು ಲಂಕಾರಾಜ್ಯದಲ್ಲಿ ವಾಸಮಾಡಿಕೊಂಡು ಆಳುತ್ತಿದ್ದ ರಾಕ್ಷಸರ ವಂಶವನ್ನು ನಿರ್ಮೂಲವಾಗಿ ತೊಲಗಿಸಿದ ದಿವ್ಯ ಶ್ರೀಶಾರ್ಙ್ಗಾಯುಧವನ್ನು ಶ್ರೀಹಸ್ತದಲ್ಲಿ ಧರಿಸತಕ್ಕಂಥಾವನಾಗಿಯೂ ಬ್ರಹ್ಮಾದಿದೇವತೆಗಳಿಗೂ ಅಧಿಪತಿಯಾದಂಥಾವನಾಗಿಯೂ ಇರುವ ಸ್ವಾಮಿಯೇ, ವಿಶ್ವಾಮಿತ್ರಮಹಾಮುನಿಯ ಯಾಗವನ್ನು ಯಾವವಿಘ್ನವೂ ಬಾರದಂತೆ ರಕ್ಷಿಸಿ ಯಜ್ಞವನ್ನು ನೆರವೇರಿಸಿ ಅಂತ್ಯದಲ್ಲಿ ಮಾಡತಕ್ಕ ಅವಭೃತಸ್ನಾನವನ್ನು ಮಾಡಿಸಿ, ಶತ್ರುಗಳನ್ನೆಲ್ಲಾ ಜಯಿಸತಕ್ಕ ಪರಾಕ್ರಮವುಳ್ಳ ಅಯೋಧ್ಯಾಧಿಪತಿಯಾದ ಶ್ರೀರಾಮಚಂದ್ರನೇ, ಉಭಯವಿಭೂತಿವಿಶಿಷ್ಟನಾದ ಶ್ರೀರಂಗನಾಥನೇ, ದಿವ್ಯತಲ್ಪದಿಂದೆದ್ದು ನಮಗೆ ಅಭಿಮುಖನಾಗಿ ಕೈಂಕರ್ಯವನ್ನು ನಿಯಮಿಸಬೇಕು.

---

O Great Father, the Saviour of the Universe ! the sweet sounds of the flute given out by the cow-herdsmen, when they let loose the ropes tied round the necks of young buffaloes of well-developed abdomen, as well as the sweet voices of the oxen—these have collectively reached the four quarters of the world; swarms of humming-bees have come out, and are seen buzzing about the paddy fields ; O Thou King of the demigods, holding in Thy hand a strong and handsome *Sārnga* bow, that caused the utter destruction of the clan of Rakshasâs residing in Lanka (Ceylon), Protector of the sacrifice performed by the great sage Visvâmitra, enabling him to finish it successfully with the closing ceremony of Avabhritha, and O Lord of Ayodhya (Oudh), the city capable of holding out successfully against the enemy, be pleased to wake up from Thy *conscious sleep*, and engage us in Thy devotional service.

ಪುಲಂಬಿನಪುಟ್ಕಳುಂಪೂಂಪೊಳಿಲ್ಕಳಿನ್ವಾಯ್ ಪೋಯಿತ್ತುಕ್ಕಙ್ಗುಲ್ಪುಕುನ್ದದುಪುಲರಿ ।
ಕಲನ್ದದುಕುಣದಿಶೈಕ್ಕನೈಕಡಲರವಮ್ ಕಳಿವಣ್ಡುಮಿಳನ್ದಿಯ ಕಲಂಬಕಂಪುನೈನ್ದ ।
ಅಲಙ್ಗಲನ್ತೊಡೈಯಲ್ಕೊಣ್ಡಡಿಯಿಣೈಪಣಿವಾನ್ ಅಮರರ್ಗಳ್ಪುಕುನ್ದನರಾತಲಿಲಮ್ಮಾ ।
ಇಲಙ್ಗೈಯರ್ಕೋನ್ವಳಿಪಾಡುಶೆಯ್ಕೋಯಿಲೆಂಬೆರುಮಾನ್ಪಳ್ಳಿಯೆಳುನ್ದರುಳಾಯೇ ॥೭॥

ಪುಲಂಬಿನಪುಟ್ಕಳುಂ—ಧ್ವನಿಮಾಡುವುವು ಪಕ್ಷಿಗಳು
ಪೂಂಪೊಳಿಲ್ಕಳಿನ್ವಾಯ್—ಪುಷ್ಪಿಸಿರುವ ಉದ್ಯಾನಗಳಲ್ಲಿ
ರುವ
ಪೋಯಿತ್ತುಕ್ಕಙ್ಗುಲ್—ಹೋಯಿತು ಹೋಯಿತು, ರಾ [ತ್ರಿಯು
ಪುಕುನ್ದದುಪುಲರಿ—ಪ್ರಾತಃಕಾಲವು ಆರಂಭವಾಯಿತು
ಕಲನ್ದದು ಕುಣದಿಶೈ—ವ್ಯಾಪಿಸಿತು ಪೂರ್ವದಿಕ್ಕಿನಲ್ಲಿ
ಕನೈಕಡಲರವಂ—ಸ್ವಭಾವವಾಗಿ ಘೋಷಿಸುವ ಸಮುದ್ರ [ದ ಧ್ವನಿಯು
ಕಳಿವಣ್ಡು—ಮಧುಪಾನದಿಂದ ಮತ್ತವಾಗಿರುವ ಭ್ರಮ
ಮಿಳನ್ದಿಯ—ಝೇಂಕಾರಮಾಡುವ
ಕಲಂಬಕಂ—ನಾನಾವಿಧ ಪುಷ್ಪಗಳಿಂದ
ಪುನೈನ್ದ—ಕಟ್ಟಲ್ಪಟ್ಟ

ಅಲಙ್ಗಲ್—ಅಲ್ಲಾಡುವ [ನ್ನು ಹಿಡಿದು
ಅಂತೊಡೈಯಲ್ಕೊಂಡು—ಸುಂದರವಾದ ಮಾಲೆಗಳ
ಅಡಿಯಿಣೈಪಣಿವಾನ್—ಸ್ವಾಮಿ ಪಾದದಲ್ಲಿ ಸೇವಿಸಲು
ಅಮರರ್ಗಳ್—ಬ್ರಹ್ಮಾದಿದೇವತೆಗಳು
ಪುಕುನ್ದನರ್—ಪ್ರವೇಶಿಸಿದರು
ಆತಲಿಲಮ್ಮಾ—ಆದಕಾರಣ, ಸ್ವಾಮಿಯೇ!
ಇಲಙ್ಗೈಯರ್ಕೋನ್—ಲಂಕಾಧಿಪತಿಯು
ವಳಿಪಾಡುಶೆಯ್ಕೋಯಿಲ್—ಕೈಂಕರ್ಯವನ್ನು ಮಾಡು
ವ ದಿವ್ಯದೇಶವಾದ ಶ್ರೀರಂಗದಲ್ಲಿ
ಎಂಬೆರುಮಾನ್—ಬಿಜಯಮಾಡಿರುವ ಶ್ರೀರಂಗನಾಥನೇ
ಪಳ್ಳಿಯೆಳುನ್ದು—ನಾಗಪರ್ಯಙ್ಕದಿಂದ ಎದ್ದು
ಅರುಳಾಯೇ—ಕೃಪೆಮಾಡಬೇಕು.

ಆಶ್ರಿತಪರಾಧೀನನಾದ ಸ್ವಾಮಿಯೇ, ದಾಸಭೂತರಾದ ನಮ್ಮಗಳ ಅಱಿಕೆಯನ್ನು ಲಾಲಿಸು, ಪುಷ್ಪಿಸಿರುವ ಉದ್ಯಾನಗಳಲ್ಲಿನ ಪಕ್ಷಿಗಳು ಎಲ್ಲಾಕಡೆಯಲ್ಲಿಯೂ "ಕೀಚ್ ಕೀಚ್" ಎಂದು ಧ್ವನಿಮಾಡುತ್ತವೆ; ಲೋಕವನ್ನೆಲ್ಲಾ ಏಕಾಕಾರವಾಗಿ ಅಂಧಕಾರದಿಂದ ಆವರಿಸಿಕೊಂಡಿದ್ದ ರಾತ್ರಿಯು ತೊಲಗಿಹೋಯಿತು; ತಿರುವಾರಾಧನಕ್ಕೆ ಯೋಗ್ಯವಾದ ಪ್ರಭಾತವು ಪ್ರಾಪ್ತವಾಗಿದೆ; ಪೂರ್ವದಿಕ್ಕಿನಲ್ಲಿ ಕಾಣುವಂಥಾ ಮತ್ತು ಸ್ವಭಾವವಾಗಿ ಘೋಷಿಸುವ ಸಮುದ್ರದ ದಿವ್ಯಧ್ವನಿಯು ಎಲ್ಲೆಲ್ಲಿಯೂ ವ್ಯಾಪಿಸಿದೆ; ಮಧುಪಾನದಿಂದ ಮತ್ತವಾದ ಭ್ರಮರಗಳು ಝೇಂಕಾರಮಾಡಿಕೊಂಡಿರುವ ನಾನಾವಿಧವಾದ ಪರಿಮಳ ಪುಷ್ಪಗಳಿಂದ ಕಟ್ಟಲ್ಪಟ್ಟ ಸುಂದರವಾದ ಮಾಲಿಕೆಗಳನ್ನು ತಮ್ಮ ಹಸ್ತಗಳಲ್ಲಿ ಹಿಡಿದುಕೊಂಡು ಬ್ರಹ್ಮಾದಿದೇವತೆಗಳು ಸ್ವಾಮಿಯ ಪಾದಸೇವೆಯನ್ನು ಮಾಡಬೇಕೆಂದು ದಿವ್ಯಸನ್ನಿಧಿಯಲ್ಲಿ ಸಮಯನಿರೀಕ್ಷಣೆಯನ್ನು ಮಾಡುತ್ತಿರುವರು. ಆದಕಾರಣ ಎಲೈ ಸರ್ವಸ್ವಾತ್ಪರನಾದ ಸ್ವಾಮಿಯೇ, ಲಂಕಾಧಿಪತಿಯಾದ ಶ್ರೀವಿಭೀಷಣನು ನಿತ್ಯಕೈಂಕರ್ಯವನ್ನು ಮಾಡುತ್ತಿರುವ ದಿವ್ಯದೇಶವಾದ ಶ್ರೀರಂಗದಲ್ಲಿ ಬಿಜಮಾಡಿರುವ ಶ್ರೀಯಃಪತಿಯೇ, ನಾಗಪರ್ಯಙ್ಕದಿಂದ ಎದ್ದು ಕೃಪೆಯಿಂದ ಕಟಾಕ್ಷಿಸಿ ನಮ್ಮ ಕೈಂಕರ್ಯವನ್ನು ನೀನು ಕೈಕೊಳ್ಳಬೇಕು.

---

O Lord, ever-beloved unto Thy devotees! The [illegible]s, frequenting the suburban orchards, are cheerfully warbling soon af[illegible] their waking-up; the dark night has disappeared; the early dawn which is the auspicious occasion for Thy worship is at hand: the noise of the roaring sea on the eastern side is heard everywhere; and our demigods have arrived here to worship Thy feet with beautiful and bright wreaths of sacred *tulasi*, containing a motley of variegated flowers round which the humming bees, intoxicated with abundant honey, buzz loudly. Hence, O Lord of Sriranga, where the king of Lanka (Vibhishna) renders his faithful devotional services to Thee, be pleased to wake up from Thy *conscious sleep*, and receive our humble and pious worship, and condescend to hear our prayers.

ಇರವಿಯರ್ಮಣಿನೆಡುನ್ದೇರೊಡುಮಿವರೋ ವಿಶ್ವೈಯವರ್ಪದಿನೊರುವಿಡೈಯರುಮಿವರೋ |
ಮರುವಿಯಮಯಿಲಿನನಱುಮುಕನಿವನೋ ಮರುತರುಂವಸುಕ್ಕಳುಂ ವನ್ದುವನ್ದೀಣ್ಡಿ ‖
ಪ್ಪುರವಿಯೋಡಾಡಲುಂ ಪಾಡಲುನ್ದೇರುಂ ಕುಮರದಣ್ಡಂಪುಕುನ್ದೀಣ್ಡಿಯವೆಳ್ಳ |
ಮರುವರೈಯನೈಯನಿನ್ಕೋಯಿಲಿನ್ಮುನ್ನಿವರೋಅರಙ್ಗತ್ತಮ್ಮಾಪಳ್ಳಿಯೆೞುನ್ದರುಳಾಯೇ ‖

ಇರವಿಯರ್—ದ್ವಾದಶಾದಿತ್ಯರೂ
ಮಣಿನೆಡುಂತೇರೊಡುಂ ಇವರೋ—ಸುಂದರವಾದ ಉದ್ದವಾದ ಈ ರಥಗಳೊಡನೆ
ಇಱೈಯವರ್—ಜಗನ್ನಿರ್ವಾಹಕರಾದ
ಪದಿನೊರುವಿಡೈಯರುಂಇವರೋ—ಈ ಏಕಾದಶರುದ್ರರು
ಮರುವಿಯ ಮಯಿಲಿನನ್—ಯಾವಾಗಲೂ ಬಿಟ್ಟಿರಿಯದೆ ನವಿಲನ್ನು ವಾಹನವಾಗಿ ಉಳ್ಳ
ಅಱುಮುಕನ್ ಇವನೋ—ಈ ಷಣ್ಮುಖನೂ
ಮರುತರುಂ—ನಾಲ್ವತ್ತೊಂಭತ್ತು ಮರುದ್ಗಣಂಗಳೂ
ವಸುಕ್ಕಳುಂ—ಅಷ್ಟವಸುಗಳೂ
ವನ್ದುವನ್ದುಈಣ್ಡಿ—ಬಂದು ಬಂದು ಸೇರಿ
ಪುರವಿಯೋಡು—ಅಶ್ವಗಳೊಡನೆ

ಆಡಲುಂಪಾಡಲುಂ—ನೃತ್ತಗೀತಾದಿಗಳು
ತೇರುಂಕುಮರದಣ್ಡಂ—ರಥಂಗಳೂ ಕುಮಾರಸ್ವಾಮಿಯ ಸೈನ್ಯಗಳೂ
ಪುಕುನ್ದು ಈಣ್ಡಿಯ—ಪ್ರವೇಶಿಸಿ ನಿಂತ
ವೆಳ್ಳಂ—ದೊಡ್ಡ ಸಮೂಹವು [ಹೋಲಿದ
ಅರುವರೈ ಅನೈಯ—ಮಹಾಮೇರುಪರ್ವತವನ್ನು
ನಿನ್‌ಕೋಯಿಲ್‌ಮುನ್ನಿವರೋ—ನಿನ್ನ ಸನ್ನಿಧಿಯ ಎದುರಿಗೆ ಇರುವವರು
ಅರಙ್ಗತ್ತಮ್ಮಾ—ಶ್ರೀರಂಗಕ್ಷೇತ್ರದಲ್ಲಿ ಶಯನಿಸಿಕೊಂಡಿರುವ ಸ್ವಾಮಿಯೇ
ಪಳ್ಳಿ ಎೞುನ್ದು—ನಾಗಪರ್ಯಙ್ಕದಿಂದ ಎದ್ದು
ಅರುಳಾಯೇ—ಕಟಾಕ್ಷಿಸಬೇಕು.

ಎಲೈ ಪರಾತ್ಪರನಾದ ಶ್ರೀಮನ್ನಾರಾಯಣನೇ, ದಾಸಭೂತನಾದ ಎನ್ನ ಅರಿಕೆಯನ್ನು ಲಾಲಿಸಬೇಕು. ಸುಂದರವಾದ ದೊಡ್ಡ ರಥಗಳುಳ್ಳ ದ್ವಾದಶಾದಿತ್ಯರೂ, ಜಗನ್ನಿರ್ವಾಹಕರಾದ ಏಕಾದಶರುದ್ರರೂ, ಯಾವಾಗಲೂ ಬಿಟ್ಟಿರಿಯದೆ ಮಯೂರಾರೂಢನಾಗಿರುವ ಈ ಷಣ್ಮುಖನೂ ನಾಲ್ವತ್ತೊಂಭತ್ತು ಮರುದ್ಗಣಂಗಳೂ, ಅಷ್ಟವಸುಗಳೂ—ಇವರೆಲ್ಲಾ ಸಪರಿವಾರರಾಗಿ ಅಹಂಪೂರ್ವಮಹಂಪೂರ್ವಮೆಂದು ಉತ್ಸಾಹದೊಡನೆ ಇಲ್ಲಿಗೆ ಬಂದು ಸೇರಿದಾರೆ. ಇದೂಅಲ್ಲದೆ ಇವರೊಡನೆ ಬಂದ ಅಶ್ವಂಗಳೂ ರಥಂಗಳೂ ಮತ್ತು ನೃತ್ತ ಗೀತಾದಿಗಳೊಡನೆ ಬಂದಿರುವ ಈ ಕುಮಾರಸ್ವಾಮಿಯ ನಿಬಿಡವಾದ ಸೇನಾಸಮೂಹವೂ ಮಹಾಮೇರುಪರ್ವತವನ್ನು ಹೋಲುವ ಈ ದಿವ್ಯಸನ್ನಿಧಿಯಲ್ಲಿ ನಿನ್ನ ಪ್ರಥಮಕಟಾಕ್ಷವೀಕ್ಷಣವನ್ನು ಬಯಸುತ್ತಾ, ಕೂಟಕೂಟವಾಗಿ ನಿಂತಿರುವುದು; ಆದಕಾರಣ ಶ್ರೀರಙ್ಗಕ್ಷೇತ್ರದೊಳು ಯೋಗನಿದ್ರೆಯಲ್ಲಿ ಶಯನಿಸಿಕೊಂಡಿರುವ ಸ್ವಾಮಿಯೇ, ನಿನ್ನ ದಿವ್ಯನಾಗಪರ್ಯಙ್ಕದಿಂದ ಎದ್ದು ಇವರನ್ನೆಲ್ಲಾ ಕಟಾಕ್ಷಿಸಿ ಅನುಗ್ರಹಿಸಬೇಕು.

---

O Great Father, in the front-yard of Thy handsome Temple, majestic and brilliant like Mahaméru mountain, behold! here are the twelve Adityâs on one side with their beautiful respective chariots; on the other side are the eleven administrators, the Rudrâs, behold! here is Kumâraswami, ever mounted on his beloved peacock-vehicle; there again the forty-nine Maruts and the eight Vasus—all these have congregated there, being anxious to get into prominent places to secure Thy kind first-glance. By the side of these are to be seen their chargers and the cars, as well as the different dances and bands of music, and the hosts belonging to Shanmukhâ's army. The whole of this assembly is anxiously waiting to be favoured with Thy kind glance. Hence, O Lord of Sriranga! deign to wake up from Thy *conscious sleep* to have a look at Thy humble devotees.

ಅನ್ದರತ್ತಮರರ್ಗಳ್ಕೂಟ್ಟಙ್ಗಳಿವೈಯೋ ಅರುನ್ದವಮುನಿವರುಮರುತರುಮಿವರೋ ।
ಇನ್ದಿರನಾನೈಯುನ್ದಾನುಮ್ವನ್ದಿವನೋ ಎಂಬೆರುಮಾನುನ್ಕೋಯಿಲಿನ್ವಾಶಲ್ ॥
ಶುನ್ದರರ್ನೆರುಕ್ಕವಿಚ್ಚಾದರರ್ನೂಕ್ಕ ಇಯಕ್ಕರುಮಯಙ್ಗಿನರ್ ತಿರುವಡಿತ್ತೊೞುವಾ ।
ಅನ್ದರಂಪಾರಿಡಮಿಲ್ಲೈಮಟ್ಟಿದುವೋ ಅರಙ್ಗತ್ತಮ್ಮಾಪಳ್ಳಿಯೆೞುನ್ದರುಳಾಯೇ ॥ ೭ ॥

ಅನ್ದರತ್ತು ಅಮರರ್ಗಳ್—ಅಣ್ಡಾಂತರವರ್ತಿಗಳಾದ ದೇವತೆಗಳೂ
ಕೂಟ್ಟಙ್ಗಳ್ ಇವೈಯೋ—ಇವರ ಪರಿವಾರಂಗಳೂ
ಅರುನ್ದವಮುನಿವರುಂ—ಅಪೂರ್ವವಾದ ತಪಸ್ಸುಳ್ಳ ಸನಕಾದಿ ಮುನಿಗಳೂ
ಮರುತರುಂಇವರೋ—ಮರುದ್ಗಣಂಗಳೂ
ಇನ್ದಿರನಾನೈಯುಂತಾನುಂ—ತ್ರಿಲೋಕಾಧಿಪತಿಯಾದ ಇಂದ್ರನ ಐರಾವತವೂ ಮತ್ತು ಇಂದ್ರನೂ
ವನ್ದಿವನೋ—ಬಂದಿರುವುದೂ ಅಲ್ಲದೆ
ಎಂಬೆರುಮಾನ್—ನಮ್ಮಗಳಿಗೆಲ್ಲಾ ಸ್ವಾಮಿಯಾದ
ಉನ್ಕೋಯಿಲಿನ್ವಾಶಲ್—ನಿನ್ನ ಸನ್ನಿಧಿಯ ಬಾಗಿಲಲ್ಲಿ
ಶುನ್ದರರ್ ನೆರುಕ್ಕ—ಗಂಧರ್ವರೂ ನುಗ್ಗಲು
ವಿಚ್ಚಾದರರ್ನೂಕ್ಕ—ವಿದ್ಯಾಧರರು ಬದಲಿಗೆ ನೂಕಲು
ಇಯಕ್ಕರುಂ—ಯಕ್ಷರು
ಮಯಙ್ಗಿನರ್—ಬೆಚ್ಚುಬೆರಗಾಗಿನಿಂತರು [ಸಲು
ತಿರುವಡಿತ್ತೊೞುವಾನ್—ನಿನ್ನ ತಿರುವಡಿಗಳನ್ನು ಸೇವಿ
ಅನ್ದರಂಪಾರ್—ಆಕಾಶವೂ ಭೂಮಿಯೂ
ಇಡಂಇಲ್ಲೈ ಮಟ್ಟಿದುವೋ—ಅಂತರವಿಲ್ಲದೆ ತುಂಬಿಕೊಂಡಿದೆಯಲ್ಲಾ [ಮಿಯೇ
ಅರಙ್ಗತ್ತಮ್ಮಾ—ಶ್ರೀರಂಗದಲ್ಲಿ ಬಿಜಯಮಾಡಿರುವ ಸ್ವಾ
ಪಳ್ಳಿಯೆೞುನ್ದು—ನಾಗಪರ್ಯಙ್ಕದಿಂದ ಎದ್ದು
ಅರುಳಾಯೇ—ಕೃಪೆಮಾಡಿ ಕಟಾಕ್ಷಿಸಬೇಕು.

ಶ್ರೀವತ್ಸಾಂಕನಾದ ಸ್ವಾಮಿಯೇ, ದಾಸಭೂತನಾದ ನನ್ನ ಅಲೆಕೆಯನ್ನು ಸ್ವಲ್ಪ ಅವಧರಿಸಬೇಕು ; ನಿನ್ನ ದಿವ್ಯ ಸನ್ನಿಧಿಯ ಬಾಗಿಲಲ್ಲಿ ತ್ರಿಲೋಕಾಧಿಪತಿಯಾದ ಇಂದ್ರನು ಮತ್ತು ಅವನ ವಾಹನವಾದ ಐರಾವತವೂ ನಿಂತಿರುವುದಲ್ಲದೆ, ಅಣ್ಡಾನ್ತರವರ್ತಿಗಳಾದ ದೇವತೆಗಳೂ ಇವರ ಪರಿವಾರಂಗಳೂ ಅಪೂರ್ವವಾದ ತಪಸ್ಸುಳ್ಳ ಸನಕಾದಿಮಹಾಮುನಿಗಳೂ ಮರುದ್ಗಣಂಗಳು ನಿನ್ನ ಸೇವೆಗಾಗಿ ಕಾದುಕೊಂಡಿರುವರು. ಈ ಸಂಘದಲ್ಲಿ ಗಂಧರ್ವರು ನುಗ್ಗಲಾಗಿ, ವಿದ್ಯಾಧರರೂ ಜಾಗವಿಲ್ಲದಿರುವಕಾರಣ ಅವರನ್ನು ಬದಲಿಗೆ ನೂಕುತ್ತಲಿದ್ದಾರೆ. ಈ ಯಕ್ಷರು ಇದನ್ನೆಲ್ಲಾ ನೋಡಿ ಬೆಚ್ಚುಬೆರಗಾಗಿದ್ದಾರೆ. ಸ್ವಾಮಿಯ ವಿಶ್ವರೂಪಸೇವೆಯನ್ನು ಮಾಡಿ ದಿವ್ಯಪಾದಂಗಳನ್ನು ಅರ್ಚಿಸಿ ಮಂಗಳಾಶಾಸನ ಮಾಡಬೇಕೆಂಬ ಕುತೂಹಲದಿಂದ ಒಬ್ಬರಮೇಲೆ ಒಬ್ಬರು ಅಹಂಪೂರ್ವ ಮಹಂಪೂರ್ವಮೆಂದು ಬಿದ್ದು ಭೂಮ್ಯಾಕಾಶದಲ್ಲಿ ಎಲ್ಲಿಯೂ ಅವಕಾಶವಿಲ್ಲದಂತೆ ಎಡೆಬಿಡದೆ ನಿಂತಿರುವರು. ಆದಕಾರಣ ಶ್ರೀರಂಗದಲ್ಲಿ ಬಿಜಯಮಾಡಿರುವ ಶ್ರೀಮನ್ನಾರಾಯಣನೇ, ನಾಗಪರ್ಯಙ್ಕದಿಂದೆದ್ದು ಕೃಪೆಮಾಡಿ ನಿನ್ನ ಆಶ್ರಿತರಾದ ನಮ್ಮ ಕೈಂಕರ್ಯವನ್ನು ದಯೆಯಿಂದ ಕೈಕೊಳ್ಳಬೇಕು.

---

O Lord, behold! on this side, near the *Sanctum Sanctorum* of Thy templ is waiting Indra, the lord of the three worlds, with his celestial elephant Irâva on that side are found the multitudes of demigods with their retinue; here the Maruts, the celestial administrators; there are seen the great Rishis, famous for their rare penance—all waiting to receive Thy Grace. O Lord God! while the handsome Gandharvâs, (celestial songsters) press closely for want of room in the front yard of Thy temple, the Vidyadharâs in return push them aside: and the Yakshâs finding no way to enter in, have got thoroughly confused: thus all have collected here leaving no room for occupation either in the mundane or ultra-mundane worlds. Hence, O Great Father, Lord of Srirânga, be pleased to wake up from Thy conscious sleep to receive the worship of Thy faithful devotees.

ವಂಬವಿೞ್ವಾನವರ್ವಾಯುಱೈವೞಙ್ಗ ಮಾನಿಧಿಕಪಿಲೈಯೊಣ್ಕಣ್ಣಾಡಿಮುದಲಾ |
ವೆಂಬೆರುಮಾನ್ಪಡಿಮೈಕ್ಕಲಙ್ಗಾಣ್ಡಱ್ಕೇಱ್ಪನವಾಯಿನಕೊಣ್ಡುನನ್ಮುನಿವರ್ ‖
ತುಂಬುರುನಾರದರ್ಪುಗುನ್ದನರಿವರೋ ತೋನ್ಱಿನನಿರವಿಯುನ್ದುಲಙ್ಗೊಳಿಪರಪ್ಪಿ |
ಯಂಬರತಲತ್ತಿನಿನ್ಱಗಲ್ಗಿನ್ಱದಿರುಳ್ಪೋಯ್ಯರಙ್ಗತ್ತಮ್ಮಾಪಳ್ಳಿಯೆೞುನ್ದರುಳಾಯೇ ‖೮‖

ವಂಬವಿೞ್—ನೂತನವಾದ ಪರಿಮಳವುಳ್ಳ
ವಾನವರ್—ದೇವತೆಗಳು
ವಾಯುಱೈ—ಗಱಿಕೇಹುಲ್ಲು
ವೞಙ್ಗ—ಸಮರ್ಪಿಸುವುದಕ್ಕೆ [ಗಳು
ಮಾನಿಧಿ—ಶ್ಲಾಘ್ಯವಾದ ಶಂಖ ಪದ್ಮ ಮುಂತಾದ ನಿಧಿ
ಕಪಿಲೈ—ಕಪಿಲವರ್ಣವುಳ್ಳ ಸುರಭಿಗಳು [ದವು
ಒಣ್ಕಣ್ಣಾಡಿಮುದಲಾ—ದಿವ್ಯವಾದ ಕನ್ನಡಿ ಮೊದಲಾ
ಎಂಬೆರುಮಾನ್—ಸರ್ವಸ್ವಾಮಿಯಾದ ನೀನು
ಪಡಿಮೈಕ್ಕಲಂ—ಉಪಕರಣಂಗಳೆಲ್ಲಾ
ಕಾಣ್ಡಱ್ಕು—ನೋಡಿ ಅನುಗ್ರಹಿಸುವುದಕ್ಕೆ
ಏಱ್ಪನವಾಯಿನ—ತಕ್ಕವುಗಳಾದಂಥಾ
ಕೊಣ್ಡುನನ್ಮುನಿವರ್—ಹಸ್ತದಲ್ಲಿ ತೆಗೆದುಕೊಂಡು ಅನ
ನ್ಯಪ್ರಯೋಜನರಾದ ಋಷಿಗಳು

ತುಂಬುರುನಾರದರ್—ತುಂಬುರುನಾರದರು [ದಾರೆ
ಪುಗುನ್ದನರ್ ಇವರೋ—ಈ ಕಡೆಯಲ್ಲಿ ಪ್ರವೇಶಿಸಿ ನಿಂತಿ
ತೋನ್ಱಿನನಿರವಿಯುಂ—ಉದಯಿಸಿದನು ಸೂರ್ಯನು
ತುಲಙ್ಗೊಳಿಪರಪ್ಪಿ—ಅಧಿಕವಾದ ತೇಜಸ್ಸನ್ನು ಹರ
ಅಂಬರತಲತ್ತಿನಿನ್ಱು—ಆಕಾಶದಿಂದಲೂ
ಅಗಲ್ಗಿನ್ಱದು—ನೀಗಿಹೋಗುತ್ತಲಿದೆ
ಇರುಳ್ಪೋಯ್—ಅಂಧಕಾರವು ತೊಲಗಿ
ಅರಙ್ಗತ್ತಮ್ಮಾ—ಶ್ರೀರಙ್ಗದಲ್ಲಿ ಬಿಜಯಮಾಡಿರುವ ಶ್ರೀ
ಮನ್ನಾರಾಯಣನೇ
ಪಳ್ಳಿಯೆೞುನ್ದು—ದಿವ್ಯಪರ್ಯಙ್ಕದಿಂದೆದ್ದು
ಅರುಳಾಯೇ—ಕೃಪಾಕಟಾಕ್ಷದಿಂದ ದಾಸಭೂತರಾದ ನಮ್ಮನ್ನು ನೋಡಿ ನಮ್ಮ ಆಂತರವಾದ ಅಂಧಕಾರವನ್ನು ತೊಲಗಿಸಬೇಕು.

ಸರ್ವರಕ್ಷಕನಾದ ಶ್ರೀಮನ್ನಾರಾಯಣನೇ! ನನ್ನ ಅಜಿಕೆಯನ್ನು ಲಾಲಿಸು, ನಿನ್ನ ಆರಾಧನಾಯೋಗ್ಯವಾದ ಪ್ರಾತಃಕಾಲವು ಸನ್ನಿಹಿತವಾಯಿತು; ನಿನಗೆ ಸಮರ್ಪಿಸಲು ನೂತನ ಪರಿಮಳವುಳ್ಳ ಗಱಿಕೇಹುಲ್ಲು, ಶ್ಲಾಘ್ಯವಾದ ಶಂಖ ಪದ್ಮ ಮುಂತಾದ ನಿಧಿಗಳೂ, ಇವುಗಳನ್ನು ಹಸ್ತಗಳಲ್ಲಿ ಹಿಡಿದುಕೊಂಡು ಸರ್ವಸ್ವಾಮಿಯಾದ ನಿನ್ನ ಪ್ರಥಮವೀಕ್ಷಣಕ್ಕೋಸ್ಕರ ಕಪಿಲವರ್ಣವುಳ್ಳ ಸುರಭಿಗಳು ನಿರ್ಮಲವಾದ ದಿವ್ಯ ದರ್ಪಣಂಗಳು ಮುಂತಾದ ಸಮಸ್ತೋಪಕರಣಂಗಳನ್ನೂ ಸಜ್ಜುಮಾಡಿಕೊಂಡು ದೇವತೆಗಳೂ ಅನನ್ಯ ಪ್ರಯೋಜನರಾದ ಋಷಿಗಳೂ, ಮಂಗಳಗೀತವನ್ನು ಹಾಡತಕ್ಕ ತುಂಬುರುನಾರದರೂ ಅವಸರಪ್ರತೀಕ್ಷಕರಾಗಿ ಬಂದು ನಿಂತಿದಾರೆ. ಇವರುಗಳಲ್ಲದೆ ಸಹಸ್ರಕಿರಣನಾದ ಸೂರ್ಯನು ತನ್ನ ದಿವ್ಯ ತೇಜಸ್ಸನ್ನು ನಾಲ್ಕುಕಡೆಯಲ್ಲಿಯೂ ಹರಡುತ್ತಾ ಉದಯಿಸಿದಾನೆ; ಅಂಧಕಾರವೆಲ್ಲಾ ಆಕಾಶದಿಂದಲೂ ನೀಗಿಹೋಯಿತು. ಆದಕಾರಣ ಶ್ರೀರಙ್ಗದಲ್ಲಿ ಬಿಜಯಮಾಡಿರುವ ಜಗನ್ನಾಥನೇ, ದಿವ್ಯ ಪರ್ಯಙ್ಕದಿಂದೆದ್ದು ಈ ಪದಾರ್ಥಂಗಳನ್ನೆಲ್ಲಾ ಕಟಾಕ್ಷಿಸಿ, ದಾಸಭೂತರಾದ ನಮ್ಮ ಆಂತರವಾದ ಅಂಧಕಾರವನ್ನು ತೊಲಗಿಸಬೇಕು.

O Lord. The Protec[...] of the Uuiverse ! the day has dawned; the demigods [...]d the Rishis, together with the celestial songsters-Tumburu and Nārada—are [...]nding in Thy front-yard with new and fragrant huriallee grass, and the nine kinds of gems in their hands to be offered as offerings to Thee; also the cows of kapil-color and beautiful mirrors and such other things are brought to the front-yard to be kindly first seen by Thee. The sun has come up spreading his brilliant rys all round, while the darkness has entirely disappeared leaving the sky clear. Great Father, Lord of Srirang[...]! be pleased to wake up from Thy conscious sleep receive our respects and to have a gracious look at these offerings.

ಏದಮಿಲ್ತಣ್ಣುಮೈಯೆಕ್ಕಮ್ಮತ್ತಳಿ ಯಾೞ್ಕುೞಲ್ಮುೞವಮೋಡಿಶೈತ್ತಿಶೈಕ್ಕೆೞುಮಿ |
ಕೀದಙ್ಗಳ್ಪಾಡಿನರ್ಕಿನ್ನರರ್ಗರುಡರ್ಗಳ್ ಕನ್ದರುವರುಮಿವರ್ಗಙ್ಗುಲುಮೆಲ್ಲಾಂ ||
ಮಾದವರ್ವಾನವರ್ಶಾರಣರಿಯಕ್ಕರ್ ಶಿತ್ತರುಮಯಙ್ಗಿನರ್ತಿರುವಡಿತ್ತೊೞುವಾ |
ನಾದಲಿಲವರ್ಕ್ಕುನ್ನಾಳೋಲಕ್ಕಮರುಳ ವರಙ್ಗತ್ತಮ್ಮಾಪಳ್ಳಿಯೆೞುನ್ದರುಳಾಯೇ ||೮||

ಏದಮಿಲ್ ತಣ್ಣುಮೈ—ನಿರ್ದುಷ್ಟವಾದ ತಮಟೆ
ಯೆಕ್ಕಂ, ಮತ್ತಳಿ—ಏಕತಂತ್ರೀವಾದ್ಯವು, ಮದ್ದಳೆ
ಯಾೞ್, ಕುೞಲ್—ವೀಣೆ ವಿಧವಾದವೇಣು, ಕೊಳಲು
ಮುೞವಮೋಡು ಇಶೈ—ಇವುಗಳ ಘೋಷದೊಡನೆ
ಸೇರಿದ ಹಾಡುಗಳು
ತಿಶೈಕ್ಕೆೞುಮಿ—ದಿಕ್ಕುಗಳೆಲ್ಲಾ ವ್ಯಾಪಿಸುವಹಾಗೆ
ಕೀದಙ್ಗಳ್ ಪಾಡಿನರ್—ಗೀತಂಗಳನ್ನು ಹಾಡತಕ್ಕವರು
ಕಿನ್ನರರ್, ಗರುಡರ್ಗಳ್—ಕಿನ್ನರರೂ, ಗರುಡರೂ
ಕನ್ದರುವರುಂ ಇವರ್—ಈ ಗಂಧರ್ವರು ಮುಂತಾದ
ವರು
ಕಙ್ಗುಲುಂ ಎಲ್ಲಾಂ—ರಾತ್ರಿಯವೇಳೆಯೆಲ್ಲಾ [ಮಾ
ದವರ್, ವಾನವರ್—ಮಹಾತಪಸ್ವಿಗಳೂ ದೇವತೆಗ
ಶಾರಣರ್, ಇಯಕ್ಕರ್—ಚಾರಣರೂ ಯಕ್ಷರೂ
ಶಿತ್ತರುಮಯಙ್ಗಿನರ್—ಸಿದ್ಧರೂ ಬೆಚ್ಚುಬೆರಗಾದರು
ತಿರುವಡಿತ್ತೊೞುವಾನ್—ನಿನ್ನ ದಿವ್ಯಪಾದಂಗಳನ್ನು ಸೇ
ವಿಸುವುದಕ್ಕೆ
ಆದಲಿಲ್ ಅವರ್ಕ್ಕು—ಆದಕಾರಣ, ಅವರೆಲ್ಲರಿಗೂ
ನಾಳ್, ಓಲಕ್ಕಂ ಅರುಳ—ಈ ದಿವಸ ಒಡ್ಡೋಲಗವನ್ನು
ಕೃಪೆಮಾಡಲು [ಸ್ವಾಮಿಯೇ
ಅರಙ್ಗತ್ತಮ್ಮಾ—ಶ್ರೀರಙ್ಗದಲ್ಲಿ ನಿತ್ಯವಾಸಮಾಡುವ
ಪಳ್ಳಿಯೆೞುನ್ದು—ದಿವ್ಯನಾಗಪರ್ಯಙ್ಕದಿಂದ ಎದ್ದು
ಅರುಳಾಯೇ—ದಾಸನಾದ ನನಗೋಸ್ಕರ ಇವರನ್ನು
ಕೈಂಕರ್ಯವೃತ್ತಿಯಲ್ಲಿ ನಿಯಮಿಸಬೇಕು.

ಲೋಕಕ್ಕೆಲ್ಲಾ ಅಸದೃಶಜನಕನಾದವನೇ, ಕೃಪೆಮಾಡಿ ಅವಧರಿಸಬೇಕು. ನೀನು ಯೋಗನಿದ್ರೆಯಿಂದ ಪ್ರಬುದ್ಧನಾಗುವಾಗ ಮಂಗಳಧ್ವನಿಯು ನಿನ್ನ ಶ್ರೋತ್ರದಲ್ಲಿ ಬೀಳುವಹಾಗೆ ನಿರ್ದುಷ್ಟವಾದ ತಮಟೆಯೂ, ಏಕತಂತ್ರೀವಾದ್ಯವೂ, ಮೃದಂಗವೂ, ವೀಣೆಯೂ, ನಾನಾವಿಧವಾದ ಕೊಳಲುಗಳೂ, ಇವುಗಳ ಸುಂದರವಾದ ಧ್ವನಿಯೊಡನೆ ಸೇರಿದ ಗೀತಗಳು ದಿಕ್ಕುಗಳಲ್ಲೆಲ್ಲಾ ವ್ಯಾಪಿಸುವಹಾಗೆ ಮನೋಹರವಾದ ಗೀತಂಗಳನ್ನು ಹಾಡತಕ್ಕವರಾದ ಕಿನ್ನರರೂ ಗರುಡರೂ ಗಂಧರ್ವರು ಮುಂತಾದವರೂ, ರಾತ್ರಿಯವೇಳೆಯಲ್ಲಿಯೂ ಎಡೆಬಿಡದೆ ತಪಸ್ಸುಮಾಡಿಕೊಂಡಿರುವ ಮಹರ್ಷಿಗಳೂ, ಸಮಸ್ತದೇವತೆಗಳೂ ಚಾರಣರೂ ಸಿದ್ಧರೂ—ಇವರೆಲ್ಲರೂ ನಿನ್ನ ದಿವ್ಯಪಾದದರ್ಶನಕ್ಕಾಗಿ ತ್ವರೆಗೊಂಡು ನೆರೆದಿರುವರು. ಆದಕಾರಣ ಎಲೈ ಶ್ರೀರಙ್ಗದಲ್ಲಿ ನಿತ್ಯವಾಸಮಾಡುವ ಸ್ವಾಮಿಯೇ, ಅವರೆಲ್ಲರಿಗೂ ಈ ದಿವಸ ಒಡ್ಡೋಲಗವನ್ನು ಕೃಪೆಮಾಡಲು, ನಿನ್ನ ದಿವ್ಯನಾಗಪರ್ಯಙ್ಕದಿಂದೆದ್ದು ದಾಸನಾದ ನನಗೋಸ್ಕರ ಎಲ್ಲರೂ ಉಜ್ಜೀವಿಸುವಹಾಗೆ ಕಟಾಕ್ಷಿಸಿ ಕೈಂಕರ್ಯವೃತ್ತಿಯಲ್ಲಿ ನಿಯಮಿಸಬೇಕು.

---

O Lord, Great Parent of the Universe! in order that Thou mayest graciously be pleased to hear auspicious and agreeable sounds at the time of Thy waking-up from Thy conscious sleep, the Kinnarás, the Garudás, the Gandharvâs of heavenly regions, the great Rishis of rare austerities, the demigods, the Chàranás the Siddhâs—all these have collected together to offer worship at Thy venerable and holy Feet in the front yard of Thy temple, singing Thy praises as in duty bound, mixing their sweet songs with the agreeable and harmonious notes derived from such musical instruments—as the pure drum, the cornet, the tabor, the vinà and the flute, which sounds have filled the eight quarters of the globe. Hence, O Lord of Sriranga, be gracious enough to wake up from Thy conscious sleep to

ಕಡಿಮಲರ್ಕ್ಕಮಲಙ್ಗಳ್ಮಲರ್ನ್ದನವಿವೈಯೋ ಕದಿರವನ್ಕನೈಕಡಲ್ಮುಳೈತ್ತನನಿವನೋ |
ತುಡಿಯಿಡೈಯಾರ್ಶುರಿಕುೞಲ್ಪಿೞಿನ್ದುದಱಿ ತುಕಿಲುಡುತ್ತೇಱಿನರ್ಶೂೞ್ಪುನಲರಙ್ಗಾ ||
ತೊಡೈಯೊತ್ತತುಳವಮುಙ್ಕೂಡೈಯುಮ್ಪೊಲಿನ್ದುತೋನ್ಱಿಯತೋಳ್ತೊಣ್ಡರಡಿಪ್ಪೊಡಿಯೆನ್ನುಂ |
ಅಡಿಯನೈಯಳಿಯನೆನ್ಱರುಳಿಯುನ್ನಡಿಯಾರ್ಕ್ಕಾಟ್ಪಡುತ್ತಾಯ್ಪಳ್ಳಿಯೆೞುನ್ದರುಳಾಯೇ ||

ಕಡಿಮಲರ್ಕಮಲಙ್ಗಳ್—ವಾಸನೆಯುಳ್ಳ ಕಮಲಗಳು
ಮಲರ್ನ್ದನಇವೈಯೋ—ಇವು ವಿಕಸಿತವಾದವು
ಕದಿರವನ್ ಕನೈಕಡಲ್—ಸೂರ್ಯನು ಘೋಷಿಸುವ ಜಲಧಿಯಲ್ಲಿ [ಉದ್ಭವಿಸಿದನು
ಮುಳೈತ್ತನನ್, ಇವನೋ—ಉದಯಗಿರಿಯಮೇಲೆ
ತುಡಿಯಿಡೈಯಾರ್—ತನುಮಧ್ಯರಾದ ಸ್ತ್ರೀಯರು
ಶುರಿಕುೞಲ್—ಸುರುಳಿಯಾದ ಕುಂತಳಗಳನ್ನು
ಪಿೞಿನ್ದು ಉದಱಿ—ಹಿಂಡಿ ಒದರಿಕೊಂಡು
ತುಕಿಲ್ಉಡುತ್ತು—ತಂತಮ್ಮ ವಸ್ತ್ರಗಳನ್ನು ಉಟ್ಟುಕೊಂಡು
ಏಱಿನರ್—ದಡವನ್ನು ಹತ್ತಿದರು
ಶೂೞ್ಪುನಲ್ಅರಙ್ಗಾ—ಕಾವೇರೀನದಿಯಿಂದ ಸುತ್ತಲ್ಪಟ್ಟ ಶ್ರೀರಂಗಕ್ಷೇತ್ರದ ಸ್ವಾಮಿಯೇ
ತೊಡೈಯೊತ್ತತುಳವಮುಂ—ಕಟ್ಟಿದ ತುಳಸೀಮಾಲೆಯನ್ನು
ಕೂಡೈಯುಂಪೊಲಿನ್ದು—ಅದರ ಬುಟ್ಟಿಯೂ ಸೇರಿ
ತೋನ್ಱಿಯತೋಳ್—ಕಾಣುವ ಭುಜವುಳ್ಳ
ತೊಣ್ಡರಡಿಪ್ಪೊಡಿಯೆನ್ನುಂ—ತೊಣ್ಡರಡಿಪ್ಪೊಡಿ ಎನ್ನುವ
ಅಡಿಯನೈ—ದಾಸಭೂತನಾದ ನನ್ನನ್ನು
ಅಳಿಯನ್ ಎನ್ಱರುಳಿ—ಅನಾಥನೆಂದು ಕೃಪೆಮಾಡಿ
ಉನ್ನಡಿಯಾರ್ಕ್ಕ್—ನಿನ್ನ ಭಕ್ತರಿಗೆ
ಆಳ್ಪಡುತ್ತಾಯ್—ಕಿಂಕರನಾಗಿ ಮಾಡು [ಎದ್ದು
ಪಳ್ಳಿಯೆೞುನ್ದು—(ಇದಕ್ಕಾಗಿ) ನಿನ್ನ ನಾಗಪರ್ಯಂಕದಿಂದ
ಅರುಳಾಯೇ—ಕೃಪೆಯಿಂದ ನನ್ನನ್ನು ಕಟಾಕ್ಷಿಸಬೇಕು

ಮಹಾಪುಣ್ಯನದಿಯಾದ ಕಾವೇರಿಯಿಂದ ಸುತ್ತಲ್ಪಟ್ಟ ಶ್ರೀರಙ್ಗಕ್ಷೇತ್ರದಲ್ಲಿ ಬಿಜಮಾಡಿರುವ ಶ್ರಿಯಃಪತಿಯೇ, ನನ್ನ ವಿಜ್ಞಾಪನೆ ಏನೆಂದರೆ—ದಿವ್ಯಪರಿಮಳವುಳ್ಳ ಕಮಲಂಗಳು ವಿಕಸಿತವಾಗಿವೆ; ಈ ಕಮಲಗಳಿಗೆ ಬಾಂಧವನಾದ ಆದಿತ್ಯನು ಘೋಷಿಸುವ ಸಮುದ್ರದಿಂದ ಉದ್ಭವಿಸಿದಾನೆ; ತನುಮಧ್ಯರಾದ ಸ್ತ್ರೀಯರು ಪ್ರಾತಃಸ್ನಾನವನ್ನು ಮಾಡಿ ಸುರುಳಿಯಾದ ತಂತಮ್ಮ ಕುಂತಳಗಳನ್ನು ಹಿಂಡಿ ಒದರಿಕೊಂಡು ವಸ್ತ್ರಂಗಳನ್ನುಟ್ಟು ದಡವನ್ನು ಹತ್ತಿ ಬರುತ್ತಲಿದಾರೆ; ಹೀಗೆ ಪ್ರಭಾತಸೂಚನೆಗಳು ನಾಲ್ಕುಕಡೆಯಲ್ಲಿಯೂ ಕಾಣಬರುವವು. ಆದಕಾರಣ ಕಟ್ಟಿದ ತುಳಸೀಮಾಲೆಯಿಂದಲೂ ಅದರ ಬುಟ್ಟಿಯಿಂದಲೂ ಅಲಂಕೃತವಾದ ಭುಜವುಳ್ಳ "ತೊಣ್ಡರಡಿಪ್ಪೊಡಿ" ಎಂದು ಕರೆಯಲ್ಪಡುವ ದಾಸನಾದ ನನ್ನನ್ನು ಅನಾಥನೆಂದು ಕೃಪೆಮಾಡಿ ನಿನ್ನ ಭಕ್ತರಿಗೆ ಕಿಂಕರನಾಗಿ ಮಾಡು; ಮತ್ತು, ಇದಕ್ಕಾಗಿ ನಿನ್ನ ದಿವ್ಯನಾಗಪರ್ಯಂಕದಿಂದೆದ್ದು ನಮ್ಮನ್ನೆಲ್ಲಾ ಕೃಪೆಯಿಂದ ಕಟಾಕ್ಷಿಸಬೇಕು.

---

O Lord, presiding over the famous city of Sriranga surrounded by the holy river Cauvery, condescend to hear me. Behold! the sweet-scented handsome lotuses have blossomed; and their lord, the sun, has appeared above the horizon, emerging from the boisterous ocean; the chaste matrons of slender waists, have already finished their morning-ablutions, squeezing and shaking their wet curly hair so as to dry; and have reached the shore with their usual costume on: thus there are ample signs to indicate the dawn of day. Accordingly, myself, Thy faithful devotee, known as Tondaradippodi (The *Dust* attached to the feet of holy devotees) have come to Thee, with the basket of flowers hung up to my shoulders and containing the wreaths of Tulasi, intended for Thy morning devotional service; and may Thou be graciously pleased to wake up from Thy *conscious sleep* and to take pity on me—a helpless orphan

# THE NITYÂNUSANDHÂNAM SERIES.

| | | | | | | |
|---|---|---|---|---|---|---|
| 1. | Tiruppallandu (ತಿರುಪ್ಪಲ್ಲಾಣ್ಡು) | | ... | 0 | 3 | 0 |
| 2. | — Do. — (with English Translation) | | ... | 0 | 4 | 0 |
| 3. | Tirupalli Yeluchchi (ತಿರುಪ್ಪಳ್ಳಿಯೆಳುಚ್ಚಿ) | | ... | 0 | 3 | 0 |
| 4. | — Do. — do. (with English Translation) | | ... | 0 | 4 | 0 |
| 5. | Tiruppavai with swapadesartham (ತಿರುಪ್ಪಾವೈ) | *(in the Press)* | ... | 1 | 0 | 0 |
| 6. | — Do. — (with English Translation) | do. | ... | 1 | 8 | 0 |
| 7. | Adhikara Sangraham (Desikar's) (ಅಧಿಕಾರಸಙ್ಗ್ರಹಂ) | do. | ... | 1 | 0 | 0 |
| 8. | — Do. — (with English Translation) | do. | ... | 1 | 8 | 0 |

Other Parts, one of which is devoted to "a **Critical inquiry** into the **Age** and **Writings of the Alvars**," are being made ready for the Press. Further particulars will be notified in due course.

A **discount** of **10** per cent. will be allowed for all orders of fifty copies and upwards.

Copies can be had of (1) Messrs. Srinivasa, Varadachari & Co., Madras; (2) S. Biligiri Aiyangar, Esq., Attorney-at-Law, Castle Kernan, Madras; (3) Messrs. Pushparatha Chetty & Co., Madras; (4) L. Srinivasaiengar, Esq., Advocate, Bangalore City: and (5) The undersigned—

**M. B. SRINIVASA AIYANGAR, M. A.,**
*Headmaster, High School, Kolar.*

*June 1898.*